ಕ್ತಿ ಉಳ್ಳವನು, ಧರ್ಮವನ್ನು ಸಾಧಿಸುವನು, ಅಧರ್ಮಕ್ಕೆ ಹೋಗನು, ಹಲವು ಯಾಗಿ ಬಂದ ಲಾಭಗಳನ್ನು ಅನೇಕ ದೋಷಗಳಿಂದ ಹಾಳುಮಾಡಿಕೊಳ್ಳುತ್ತಾನೆ, ನೇಕ ಪತ್ನಿಯರನ್ನು ಪಡೆಯುತ್ತಾನೆ ಕ್ರೂರವಾದ ರೋಗಗಳನ್ನು ಗೆಲ್ಲುತ್ತಾನೆ, ವಿಷ ತು, ವಿಷಮೃಗ ಈ ಗಂಡಗಳಿಂದ ಮರಣ ಹೊಂದುವನು.

## ೪. ಕರ್ಕಾಟಕಲಗ್ನ ಜಾತಕವು

ಕರ್ಕಾಟಕ ಲಗ್ನದ ಪೂರ್ವಭಾಗದಲ್ಲಿ ಜನನವಾದರೆ ಬುದ್ಧಿ ಸ್ಥಿರವಿಲ್ಲವು, ಮೋಹ ದ್ಯವಿರುತ್ತೆ, ಕರ್ಕಾಟಕಲಗ್ನ ಜಾತಕನು ಭಯಸ್ವಭಾವ ಉಳ್ಳವನು, ಎದೆಯಲ್ಲಿ ಶಿರುವದು,ಶೀತವಾದ ಪ್ರಕೃತಿ,ಗ್ರಹಿಸಿದ್ದನ್ನು ಮರೆಯುವವನಲ್ಲ,ಪಟ್ಟು ಹಿಡಿಯು ವನು, ಪಾಪಿಷ್ಠರಾದ ಶತ್ರುಗಳನ್ನು ಸೇವಿಸುತ್ತಾನೆ, ಹೆರವರ ವಡವೆಯಾದರೂ ಚ್ಚು ವೆಚ್ಚಮಾಡುವದಿಲ್ಲ, ತನ್ನ ಜನರಿಂದ ಗರ್ವಪಡುತ್ತಾನೆ, ತನ್ನ ಜನಗಳಿಂದ ಸ್ಕರಿಸಲ್ಪಡುತ್ತಾನೆ, ಯಾವಾಗಲೂ ಧನವನ್ನು ಆರ್ಜಿಸಿಕೊಳ್ಳುವದರಲ್ಲಿ ಯತ್ನ ತುತ್ತಲಿರುವನು, ಹೆರವರ ಯಜಮಾನ್ಯದಲ್ಲಿ ಸಿಕ್ಕಿ ಇರುವನು, ತನಗೆ ಸರಿಯಾದ ಡತಿ ಉಳ್ಳವನು, ಶತ್ರುಗಳಿಂದ ಗೆಲ್ಲಲ್ಪಡುವನು. ಗುಂಪಿನಲ್ಲಿ ಪೂಜ್ಯತೆಯುಳ್ಳ ನು, ಗಂಟ್ಲುರೋಗ, ಶ್ಲೇಷ್ಮವ್ಯಾಧಿ, ಮೂಳೆ ಮುರಿಯುವಿಕೆ, ಅಂಗಭಂಗ, ಕತ್ತು ಚಿಕೊಳ್ಳುವಿಕೆ, ನೀರು ಸೇರಿ ಬೊಜ್ಜು ಬೆಳೆಯುವಿಕೆ, ಇಂಥಾ ಕಾರಣಗಳಿಂದ ರಣವನ್ನು ಹೊಂದುತ್ತಾನೆ.

## ೫. ಸಿಂಹಲಗ್ನ ಜಾತಕವು

ಸಿಂಹಲಗ್ನದಲ್ಲಿ ಹುಟ್ಟಿದವನು ಕಠಿಣಸ್ವಭಾವವುಳ್ಳವನಾಗಿಯೂ, ಮಾಂಸಗಳಲ್ಲಿ ಸವಾ ಭೋಜ್ಯವಸ್ತುಗಳಲ್ಲಿ ಇಷ್ಟವುಳ್ಳವನಾಗಿಯೂ, ಪಿತ್ತಪ್ರಕೃತಿ, ಅಗಲವಾದ ೂಗುವುಳ್ಳವನಾಗಿಯೂ ಇರುತ್ತಾನೆ. ಬಹು ಕೆಲಸವನ್ನು ಆರಂಭಿಸುವನು, ಕುಟುಂ ನು, ಲೋಭಿ, ಜನಸಮ್ಮತನು, ಪ್ರಸಿದ್ಧನು, ಸಹಜವಾಗಿ ವ್ಯಸನಪಡುತ್ತಿರುವನು, ಾಕ್ರಮಶಾಲಿ, ತನ್ನವರನ್ನು ಘಾತಿಸುವನು, ಕೆಲಸ ಮಾಡುವುದರಲ್ಲಿ ವ್ಯಸನ ಪಡು ದಿಲ್ಲ, ಹಲವು ಉಪಾಯಗಳಿಂದ ಹಣ ಸಂಪಾದಿಸಿದರೂ ಧರ್ಮಿಷ್ಟನಲ್ಲ, ಕುಲವತಿ ರಾದ ಹೆಂಡರನ್ನು ಪಡೆಯುವನು. ಹಲ್ಲುನೋವು, ಸೊಂಟನೋವು, ಮೊಳಕಾಲು ೋವು ಈ ರೋಗಗಳು ಉಂಟಾಗುತ್ತೆ. ಆಯುಧಗಂಡ, ವಿಷಗಂಡ, ರೋಗಪೀಡೆ, ಜಂತುಗಂಡ, ಕಟ್ಟಿಗೆಪೆಟ್ಟು ಹಸಿವು, ಇಂಥಾವುಗಳಿಂದ ಮರಣ ಹೊಂದುತ್ತಾನೆ.

## ೬. ಕನ್ಯಾಲಗ್ನ ಜಾತಕವು

ಕನ್ಯಾಲಗ್ನ ಜಾತಕನಿಗೆ ಸವಿನುಡಿಗಳು, ಸ್ವಲ್ಪ ಕಾಂತಿ, ನೀಳವಾದ ಕೈಕಾಲು, ಶ್ರಪ್ರಕೃತಿ, ಸೊಗಸಾದ ಮೈ, ವ್ರಣ ರೋಗ, ಧನವಿರುತ್ತೆ, ಲೋಭಿ ತನ್ನವರಿಗೆ

ಇಷ್ಟನು, ಹೆಣ್ಣುಮಕ್ಕಳು ಹೆಚ್ಚು, ಅಣ್ಣತಮ್ಮಂದಿರ ವಿರೋಧ, ಧರ್ಮದಲ್ಲಿ
ಸ್ವಲ್ಪವಾದ ಲಾಭ, ಕೆಲಸದ ಜಾಣತನವಿರುತ್ತೆ. ಪಶುಗಂಡ, ಶಸ್ತ್ರಗಂಡ, ಪಿತ್ತರೋ
ದುಃಖ, ಆಯಾಸ, ಉರಿಲು ಇಂಥಾವುಗಳಿಂದ ಮರಣವನ್ನು ಹೊಂದುತ್ತಾನೆ.

## ೭. ತುಲಾಲಗ್ನ ಜಾತಕವು

ತುಲಾ ಲಗ್ನದಲ್ಲಿ ಹುಟ್ಟಿದವನಿಗೆ ಅಂಗವು ಕೊಂಚ ಹೆಚ್ಚು ಕಡಿಮೆಯಾಗಿರು
ಸ್ವಭಾವ ಸರಿಯಾದುದಲ್ಲ. ಶೀತವಾದ ಪ್ರಕೃತಿ, ಚಂಚಲ ಬುದ್ಧಿ, ಕೊರಗಳು ಕುರು
ಉಪಕಾರವನ್ನು ಎಣಿಸುತ್ತಾನೆ. ಬಹಳ ಹಣ ಸಂಪಾದಿಸಿ ಪ್ರಯೋಜನಗಳನ್ನು
ಯುತ್ತಾನೆ. ಧಾರಾಳವಾಗಿ ವೆಚ್ಚಮಾಡಿ ಕೀರ್ತಿ ಪಡೆಯುತ್ತ ಹಿರಿಯರನ್ನು ಸೇವಿ
ವನು. ತಂದೆಯನ್ನು ವಿನಾಯಿಸಿ ಮಿಕ್ಕ ನೆಂಟರಿಗೂ, ಒಡಹುಟ್ಟಿದವರಿಗೂ ಪ್ರ
ನಾಗುತ್ತಾನೆ. ದಾರಿ ನಡೆಯುವುದರಲ್ಲಿ ಅಪೇಕ್ಷೆಯುಳ್ಳವನು, ಧರ್ಮಿಷ್ಟನು, ತನ್ನ
ರೆಂದರೆ ಅಪೇಕ್ಷೆಯುಂಟು, ಬಹುಶಃ ದುಖಾಃದಿಗಳಿಂದ ಕ್ಲೇಶಪಡುವನು. ಪ್ರಸಿ
ನಾದ ಪುರುಷನ ದೆಸೆಯಿಂದಲೋ ಸ್ವಜನರಿಂದಲೋ ಸಾಧುವಾದ ಚತುಷ್ಪಾ
ಜಂತುವಿನಿಂದಲೋ ಗಂಡವುಂಟು. ಇಷ್ಟ ಜನವನ್ನು ಬಿಟ್ಟು ಉಪವಾಸದಿಂದಲೊ
ಮಾರ್ಗಾಯಾಸದಿಂದಲೋ ಬೆವರು ಹತ್ತಿ ಸಾಯುವನು.

## ೮. ವೃಶ್ಚಿಕಲಗ್ನ ಜಾತಕವು

ವೃಶ್ಚಿಕ ಲಗ್ನದಲ್ಲಿ ಹುಟ್ಟಿದವನು ಅಗಲವಾದ ಬಾಯಿ, ಹೊಟ್ಟೆ ಉಳ್ಳವನ
ಕ್ರೂರನು, ಪಿತ್ತ ಸ್ವಭಾವ, ಕೊಂಚ ಹಳದೀ ಕಣ್ಣು, ಮೆಲ್ಲಗೂ ಜಾಗ್ರತೆಯಾಗಿಂ
ನಡೆಯುವನು, ಹೆರವರಿಗೆ ಒಡೆಯನು, ಕುಟುಂಬ ಜನವೂ ಸ್ವಜನವೂ ಹೆಚ್ಚಾಗಿ
ವುದು, ನಾಶಮಾಡಿಬಿಡುವನು, ಹೆಂಡತಿಯ ನಿಮಿತ್ತವಾಗಿ ದುಃಖ ಕೆಡಿಸಿಕೊಂ
ಸೋಲುವನು, ವೆಚ್ಚಮಾಡುವನು. ಬಹು ಸಂತಾನವುಳ್ಳವನು. ಸುಖ ಕಡಿ
ಅಣ್ಣ ತಮ್ಮಂದಿರಿಗೆ ವಿರೋಧಿ, ಶೂದ್ರನನ್ನು ಸೇವಿಸುವನು. ಧರ್ಮವನ್ನು ಬಿ
ವನು, ಧನವನ್ನು ಹೆಚ್ಚಾಗಿ ಕೊಡುವುದಿಲ್ಲ, ತನ್ನ ಕುಲದಲ್ಲಿ ಹುಟ್ಟಿದವರೇ ಶತ್ರುಗ
ಗುತ್ತಾರೆ. ಹಲವು ಬಗೆ ರೋಗಗಳು ಉಂಟು. ಮೈಯಲ್ಲಿ ಘಾಯ, ಶತ್ರು
ಕೈಗೆ ಸಿಗುವಿಕೆ, ಕಟ್ಟಲ್ಪಡುವಿಕೆ, ರೋಗಗಳು, ಬೆಂಕಿ ಇಂಥಾ ನಿಮಿತ್ತಗಳಿಂದ ಮೃತ
ವನ್ನು ಹೊಂದುವನು.

## ೯. ಧನುರ್ಲಗ್ನ ಜಾತಕವು

ಧನುರ್ಲಗ್ನದಲ್ಲಿ ಹುಟ್ಟಿದವನು ಶಿತೋಷ್ಣ ಪ್ರಕೃತಿ, ತುಟಿಯು ಹಲ್ಲು ದಪ
ಶಿಶ್ನವು, ತೊಡೆಗಳು, ಭುಜಗಳು, ಮಾಂಸಪುಷ್ಟಿಯಾಗಿ ಬಲಿತಿರುವುದು. ಕೆಲಸದ
ಪ್ರಯತ್ನಶಾಲಿ, ಶೂರನು, ಚಾಡಿ ಹೇಳುವ ನೀಚ ಜನರನ್ನು ಸೇವಿಸುತ್ತಾನೆ. ಕ

ದಲೂ ಬೆಂಕಿಯಿಂದಲೂ ಅರಮನೆಗೆ ದಂಡ ತೆರುವದ್ದರಿಂದಲೂ ಇದ್ದ ಧನ ನಾಶ ಗುತ್ತೆ, ತಿಳುವಳಿಕೆ ಉಳ್ಳವನು, ಹಲವು ಸಂತಾನ ಉಳ್ಳವನು. ಬಹುಜನಗಳಲ್ಲಿ ಜ್ಯನು. ದಾಯಾದಿಗಳನ್ನು ಹೊಡೆಯುವುದರಲ್ಲಿ ಇಚ್ಛೆಯುಳ್ಳವನು. ಅನ್ಯದೇಶ ಲ್ಲಿ ಇಷ್ಟ ಬಂದಂತೆ ಕೆಲಸ ಮಾಡುತ್ತಾನೆ. ದೊರೆಗಳ ಮನಸ್ಸಿಗೆ ತಕ್ಕಹಾಗೆ ನಡೆದು ಳ್ಳುವನು. ಧರ್ಮದಲ್ಲಿ ಮಧ್ಯಸ್ತವಾದ ಬುದ್ಧಿ ಉಳ್ಳವನು. ಹೆಂಡತಿಯೊಡನೆ ರೋಧ ಪಡೆದುಕೊಳ್ಳುತ್ತಾನೆ. ಬಾಯಿಯಲ್ಲಿ ರೋಗಗಳುಂಟು. ಪಶುಗಂಡ, ರ್ಪಗಂಡ, ರಾಜಶಿಕ್ಷೆ, ಬಂಧನ ಇವುಗಳಿಂದ ಮರಣವಾಗುತ್ತೆ.

## ೧೦. ಮಕರಲಗ್ನ ಜಾತಕವು

ಮಕರಲಗ್ನದಲ್ಲಿ ಹುಟ್ಟಿದವನಿಗೆ ಮೂಗಿನ ಸೊಳ್ಳೆ ಸಣ್ಣ, ಬಾಯಿ ಅಗಲ, ಕೈ ಲು ಉದ್ದ, ವಾಯು ಪ್ರಕೃತಿ, ಮೃಗದ ಹಾಗೆ ಇರುವ ಮುಖ, ಹೆದರುವ ಸ್ವಭಾವ ಪಲ ಬುದ್ಧಿ, ಕಟ್ಟಿಗೆ ಸಿಕ್ಕಿಹೋಗುವನು, ಕ್ಷುದ್ರವಾದ ಕುಟುಂಬಿ, ಅಲ್ಪವಾದ ಧನ ಳ್ಳವನು, ಪಿಸುಣನು, ಹೆಣ್ಣು ಮಕ್ಕಳುಳ್ಳವನು, ಸ್ವಂತ ಜನಗಳು ಸತ್ತುಹೋಗು ರು, ಸೋದರರ ಸಂಬಂಧಿಯಾಗಿರುವನು. ಶೌರ್ಯದಿಂದಲೂ, ದೊರೆಯಿಂದಲೂ ಡಿನಿಂದಲೂ ಧನವನ್ನೂ ಸಂಪಾದಿಸುತ್ತಾನೆ. ಉಪವಾಸ ವ್ರತಗಳ ಸ್ವಭಾವವುಳ್ಳ ನು. ನೀಚಳಾಗಿಯೂ ಇಷ್ಟಳಾಗಿಯೂ ಇರುವ ಹೆಂಡತಿಯನ್ನು ಹೊಂದುತ್ತಾನೆ. ಹಳ ವ್ಯಾಜ್ಯಗಾರ, ಕೂದಲು ಕೊಂಚವಿರುತ್ತೆ, ಮೊಣಕಾಲಿನಲ್ಲಿ ಬಲ ಸಾಲದು. ೋಗಪೀಡಿತನು. ಹುಡಗನಿಂದಲೋ, ವಾಯುವಿನಿಂದಲೋ, ಆಯುಧದಿಂದಲೋ ಜಕೋಪದಿಂದಲೋ, ವಿಷಪ್ರಯೋಗದಿಂದಲೋ. ಬೀಳುವುದರಿಂದಲೋ ನೆಯಿಂದಲೋ, ಪಿತ್ತಾಜೀರ್ಣದಿಂದಲೋ, ದಾರಿ ತಪ್ಪಿ ಬೀಳುವದ್ದರಿಂದಲೋ ಯುತ್ತಾನೆ.

## ೧೧. ಕುಂಭಲಗ್ನ ಜಾತಕ

ಕುಂಭಲಗ್ನ ಜಾತಕನು ಬುದ್ಧಿಸ್ತಂಭವಾಗುವನು. ಕ್ರೂರ ಗುಣವುಳ್ಳವನು. ಲದಲ್ಲಿ ಪೂಜ್ಯನು. ಅಣ್ಣನುಳ್ಳವನು, ಪಿತ್ತ ವಾತ ಪ್ರಕೃತಿ, ಎಳ್ಳಿನ ಹಾಗಿರುವ ೂಗುಳ್ಳವನು. ಬಂದ ಲಾಭಗಳನ್ನು ಹೋಗಲಾಡಿಸಿಕೊಳ್ಳುತ್ತಾನೆ. ಬಹುಮಂದಿ ವಕರು ಇರುವರು. ವೆಚ್ಚಗಳಿಂದ ಸಾಧಿಸಲ್ಪಡುತ್ತಾನೆ. ಸಣ್ಣಗೆ ಬಡವಾಗಿರು ನು. ತನ್ನ ಗೋತ್ರದ ಹಿರಿಯರಿಗೂ, ಶತ್ರುಪಕ್ಷದವರಿಗೂ, ತನ್ನವರಿಗೂ, ಶತ್ರು ಗಿರುವನು. ಪಾಪಕಾರ್ಯದಲ್ಲಿ ಆಸಕ್ತನಾಗಿರುವನು. ಸಣ್ಣವನು, ಸೊಗಸಾದ ಂಡತಿಯನ್ನು ಪಡೆಯುತ್ತಾನೆ. ಡಂಬಾರ್ಥವಾಗಿ ಧರ್ಮಕಾರ್ಯ ಮಾಡುವುದರಲ್ಲಿ ೇವರ ಪೂಜೆ ಮಾಡಿಸುತ್ತಾನೆ. ಜಗಳಗಾತಿ ಹೆಂಡತಿ ದೊರೆಯುವಳು. ಎದೆಯಲ್ಲಿ

ಹಲವು ಬಗೆ ಶ್ಲೇಷ್ಮ ರೋಗಗಳು ಸೇರುತ್ತವೆ. ಹೊಟ್ಟೆಯೊಳಗಿನ ರೋಗದಿಂದಲೋ, ವಾಂತಿಯಿಂದಲೋ, ಹೆಂಗಸರ ಮುದ್ದಿಡಿನಿಂದಲೋ, ತಂತ್ರಪ್ರಯೋಗದಿಂದಲೋ ಸಾಯುವನು.

## ೧೨. ಮೀನಲಗ್ನ ಜಾತಕ

ಮೀನ ಲಗ್ನದಲ್ಲಿ ಹುಟ್ಟಿದವನ ಕಣ್ಣು ಮೀನಿನ ಹಾಗೆ ಇರುವುದು. ತುಟಿಯು ಮೂಗೂ ದಪ್ಪ. ಶ್ಲೇಷ್ಮವಾತ ಪ್ರಕೃತಿ. ಕಠಿಣವಾದ ಮನಸ್ಸು, ಚರ್ಮದೋ ಹಲವು ಬುದ್ಧಿ, ಹಲವು ಚೇಷ್ಟೆ, ಯೋಗ್ಯರಿಂದಲೂ ಸೇವಕರಿಂದಲೂ ಲಾಭ ಸ ಗಳುಂಟು. ತನ್ನವರಲ್ಲಿಯೂ ಹೆಂಗಸರಲ್ಲಿಯೂ ಪೂಜ್ಯತೆ, ಒಡಹುಟ್ಟಿದವರ ಮೇ ಅಧಿಕಾರ, ಪುಣ್ಯಕಾರ್ಯದಲ್ಲಿ ಸಂಬಂಧ, ತಂದೆಯಿಂದ ವೃದ್ಧಿ, ಒಳ್ಳೇ ಹೆಂಡ ಆದಾಗ್ಯೂ ನೀಚವಾದ ಆಚಾರಗಳುಳ್ಳವಳಾಗಿ ಇರುತ್ತಾಳೆ. ಕ್ರೂರವಾದ ಶತ್ರುಗ ಇರುವರು. ಮೂಲವ್ಯಾಧಿ ರೋಗವಿರುತ್ತೆ. ಹಾವು, ನಾಯಿ, ಸಿಂಹ ಇಂ ಜಂತುಗಳಿಂದಲೋ, ದುಷ್ಟರಾದ ಮನುಷ್ಯರಿಂದಲೋ, ರಹಸ್ಯಾಂಗದ ರೋ ವಿಕಾರಗಳಿಂದಲೋ ಮರಣವಾಗುತ್ತೆ.

### ಲಗ್ನಾದಿಯಾಗಿ ದ್ವಾದಶಭಾವಗಳಿಗೂ ಫಲವನ್ನು ಸಂಕ್ಷೇಪವಾಗಿ ವಿವರಿಸಿದೆ.

## ೧. ತನುಭಾವ

ಲಗ್ನಾಧಿಪತಿ ಉಚ್ಚ, ಮಿತ್ರಕ್ಷೇತ್ರ ತ್ರಿಕೋಣ, ಶುಭ ಷಡ್ವರ್ಗ ಸ್ವಕ್ಷೇತ್ರ ಶು ಯುಕ್ತ ದೃಷ್ಟಿ, ಸ್ಥಾನಾದಿ ಬಲಯುಕ್ತನಾದರೆ ರಾಜಲಕ್ಷಣ ಶರೀರ, ದೇಹಕಾಂ ಆರೋಗ್ಯ ಸುಖ, ಗೌರವಗಳುಂಟಾಗುವುದು. ಲಗ್ನಾಧಿಪತಿ ಉಚ್ಚ ಮಿತ್ರ ಸ್ವನವಾಂ ಗಳಿದ್ದು ಶುಭಯುಕ್ತ ದೃಷ್ಟನಾದರೆ ದೇಹಸೌಖ್ಯವುಂಟು. ಲಗ್ನಾಧಿಪತಿ ಕೇಂ ತ್ರಿಕೋಣಗಳಲ್ಲಿ ಶುಭದೃಷ್ಟನಾಗಿ ಅಶುಭವೀಕ್ಷಣೆ ಇಲ್ಲದಿದ್ದರೆ ದೇಹಸೌಖ್ಯವುಂಟ ಲಗ್ನಾಧಿಪತಿ ನೀಚ, ಅಸ್ತ ಶತ್ರುಕ್ಷೇತ್ರಗತನಾಗಿ ಪಾಪಯುಕ್ತನಾದರೂ ೬-೮-೧೨ ಯವರು ಬಲಹೀನರಾದರೂ. ಅಶುಭ ಷಡ್ವರ್ಗ ಹೊಂದಿದರೂ ದೇಹಾರೋಗ್ಯವಿ ಲಗ್ನದಲ್ಲಿ ರಾಹು ಗುಳಿಕ ಪಾಪಗ್ರಹವಿದ್ದರೂ, ಲಗ್ನಾಧಿಪತಿ ಪಾಪಾಕ್ರಾಂತನಾಗಿ ಲ ದಲ್ಲಿದ್ದರೂ ಶರೀರ ಸುಖವಿಲ್ಲದೆ ವಂಚಕ ಚೋರರಿಂದ ಸಂಕಟಪಡುವನು.ಲಗ್ನಾಧಿ

ವನ ಸಂಗಡ ಲಗ್ನದಲ್ಲಿ ಪಾಪಾಕ್ರಾಂತನಾದರೂ ಅಶುಭದೃಷ್ಟನಾದರೂ ಕಲ್ಲು, ಕತ್ತಿ ಂತಾದ ಆಯುಧಗಳಿಂದ ಕಟ್ಟಿಗೆ ದಬ್ಬೆಗಳಿಂದ ತಗಲಿ ಘಾಯು ಬೀಳುವುದು, ಲಗ್ನ ಲ್ಲಿ ರವಿಯಿದ್ದು ಕುಜನಿಂದ ನೋಡಲ್ಪಟ್ಟರೆ ಶ್ವಾಸಬಾಧೆ ಉಂಟು. ಕುಜನು ಲಗ್ನದಲ್ಲಿ ದ್ದು ರವಿ ಶನಿದೃಷ್ಟನಾದರೆ ಕಠಾರಿಗಳಿಂದ ತಿವಿಯಲ್ಪಡುವನು. ಲಗ್ನದಲ್ಲಿ ಕೇತು ದ್ದು ಅಶುಭ ವೀಕ್ಷಿತನಾದರೂ ಪಿಶಾಚಿ ಚೋರಾದಿಗಳ ಬಾಧೆಯುಂಟು. ಲಗ್ನವು ಗ್ನಾಧಿಪತಿಯು ಚಂದ್ರನು ಚರರಾಶಿಯಲ್ಲಿ ಇದ್ದರೆ ಜಾತಕನು ಸದಾ ಸಂಚಾರಶೀಲ ಗಿರುವನು. ಪರದೇಶದಲ್ಲಿ ದ್ರವ್ಯಾರ್ಜನೆ ಮಾಡುವನು, ಈ ಮೂರೂ ಸ್ವಸ್ಥಳದಲ್ಲಿ ದ್ದರೆ ಸ್ವದೇಶದಲ್ಲಿ ಭಾಗ್ಯವಂತನಾಗಿ ಅನುಕೂಲ ಜೀವಿಯಾಗುವನು. ಈ ಮೂರೂ ದ್ವಿಸ್ವಭಾವದಲ್ಲಿ ಇದ್ದರೆ ಸ್ವಲ್ಪ ಸಂಚಾರವೂ, ಸ್ವಲ್ಪ ಸ್ವದೇಶವಾಸವೂ, ಸ್ವದೇಶ ಪರ ದೇಶದಲ್ಲಿಯೂ ಭಾಗ್ಯದಿಂದ ಕೂಡಿರುವನು. ಲಗ್ನದಲ್ಲಿ ಶುಭ, ದ್ವಿತೀಯದಲ್ಲಿ ಪಾಪ ನಿದ್ದು ಅಶುಭರು ಕೇಂದ್ರದಲ್ಲಿ ಇದ್ದರೆ ಆದಿಭಾಗದಲ್ಲಿ ದುಃಖ, ಅನಂತರ ಸುಖ ಗ್ನದಲ್ಲಿ ಪಾಪನಿದ್ದು ಜನ್ಮದಲ್ಲಿ ಶುಭನಿದ್ದು ಭಾಗ್ಯದಲ್ಲಿ ಶುಭಗ್ರಹಗಳಿದ್ದು ಲಗ್ನಾಧಿ ದೇವಲೋಕಾಂಶದಲ್ಲಿ ಇದ್ದರೆ ಬಾಲ್ಯದಲ್ಲಿ ಸೌಖ್ಯವು, ಅನಂತರದಲ್ಲಿ ದುಃಖವು.

## ೨ ಧನಭಾವ

ಲಗ್ನಾಧಿಪತಿ ಬಲಿಷ್ಠನಾಗಿ ದ್ವಿತೀಯಾಧಿಪತಿ ಉಚ್ಚ ಮೂಲತ್ರಿಕೋಣಗಳಲ್ಲಿದ್ದು ಡೂ ಶುಭಯುಕ್ತ ದೃಷ್ಟನಾದರೆ ವಾಗ್ವಿಲಾಸ ಕುಟುಂಬ ಸಂರಕ್ಷಕ, ಬಹುಜನ ಪೋಷಕನಾಗುವನು. ದ್ವಿತೀಯದಲ್ಲಿ ಅಶುಭರು ಅನೇಕರಿದ್ದು ದ್ವಿತೀಯಾಧಿಪತಿ ಪಾಪರಾಶಿಯಲ್ಲಿದ್ದು ಲಗ್ನಾಧಿಪತಿ ಬಲಹೀನನಾಗಿ ೩-೬-೧೨ರಲ್ಲಿ ಇದ್ದರೆ ಜೀವನಕ್ಕೆ ಗದೆ ಸಂಕಟಪಡುವನು. ಬುಧನು ೨ನೆ ಮನೆಯಲ್ಲಿ ಶುಕ್ರನೊಡನೆಯಾಗಲೀ ಬುಧ ಡನೆಯಾಗಲೀ ಸೇರಿ ೨ರಲ್ಲಿ ಇದ್ದು ಅಥವಾ ಶುಕ್ರನು ಉಚ್ಚನಾದರೆ ಜ್ಯೋತಿ ಸ್ತ್ರದಲ್ಲಿ ಪಂಡಿತನಾಗುವನು. ಲಗ್ನಾಧಿಪತಿ ಯಾವ ನವಾಂಶದಲ್ಲಿರುವನೋ ಆ ಶ್ಯಾಧಿಪತಿ ಬಲಾಢ್ಯನಾಗಿ ವಿಶೇಷಾಂಶದಲ್ಲಿದ್ದರೆ ಬಹು ಧನವಂತ. ೧-೨ನೆಯವರು ರಿಯುವನಿರುವ ನವಾಂಶಾಧಿಪತಿಯಿಂದ ನೋಡಲ್ಪಟ್ಟರೆ ಧನಿಕನು. ೯ನೇ ಅಧಿಪತಿ ಅಧಿಪತಿಯೊಡನೆ ಸೇರಿ ಲಗ್ನಾಧಿಪತಿ ಇರುವ ನವಾಂಶಾಧಿಪತಿಯಿಂದ ನೋಡ ಟ್ಟರೆ ಬಹಳ ಧನಿಕ. ೧-೨-೧೧ರಲ್ಲಿ ಶುಭಗ್ರಹಗಳಿದ್ದು ಅವರು ತಮ್ಮ ಉಚ್ಚ ತ್ರಿ ಸ್ವನವಾಂಶಗಳಲ್ಲಿದ್ದು ಧನಾಧಿಪತಿ ಇರುವ ನವಾಂಶಾಧಿಪತಿಯಿಂದ ನೋಡ ಟ್ಟರೆ ಬಹಳ ಹೆಚ್ಚಾದ ಧನವಿರುವುದು, ೧೧ನೇ ಮನೆಯವನು ೧ರಲ್ಲಿದ್ದು ೧ನೇಯ ಎರಡರಲ್ಲಿ ಎರಡನೆಯವನು ಹನ್ನೊಂದರಲ್ಲಿ ಇದ್ದರೆ ನಿಧಿ ರೂಪವಾಗಿ ಹಣ ರಕುವುದು. ೧-೨ನೆಯವನು ೩ರಲ್ಲಿ ಇದ್ದು ಪುರುಷಗ್ರಹಗಳಿಂದ ನೋಡಲ್ಪಟ್ಟು ನೆಯವನಿಂದ ದೃಷ್ಟಯುಕ್ತನಾದರೆ ಭ್ರಾತೃಮೂಲಕವಾಗಿ ಧನಲಾಭ. ೩ನೆಯ

ವನು ೨ರಲ್ಲಿ ಇದ್ದು ಕುಜದೃಷ್ಟನಾದರೆ ಒಡಹುಟ್ಟಿದವರಿಂದ ಧನಲಾಭ. ೧ನೆಯುವ ೨ರಲ್ಲಿ, ೨ನೆಯುವನು ೧ರಲ್ಲಿ ಅಥವ ಒಬ್ಬರಿಗೊಬ್ಬರು ಕೇಂದ್ರತ್ರಿಕೋಣಗಳಲ್ಲಿ ಪರಸ್ಪರ ನೋಡಿದರೆ ಬಹು ವಿಧದಲ್ಲಿ ಧನಪ್ರಾಪ್ತಿ. ೨ನೆಯವನು, ೪ನೆಯುವನಿ ಯುಕ್ತ ದೃಷ್ಟನಾದರೆ ತಾಯಿಯಿಂದಲೂ ಕೃಷಿಯಿಂದಲೂ ಬಂಧುಗಳಿಂದಲೂ ಧ ಪ್ರಾಪ್ತಿಯುಂಟು. ೫ನೆಯುವನು ೨ರಲ್ಲಿದ್ದು, ೨ನೆಯುವನು ಗುರು ಬಲಿಷ್ಠನಾದರೆ ಪು ರಿಂದ ಧನ ಲಾಭ. ೬ನೆಯುವನು ೨ರಲ್ಲಿದ್ದು ೨ನೆಯ ಅಧಿಪತಿ ಬಲಿಷ್ಠನಾದರೆ ಶತ್ರುಗಳಿ ಧನ ಬರುವುದು. ೭ನೆಯುವನು ೨ರಲ್ಲಿದ್ದು ಶುಕ್ರನು ಬಲಿಷ್ಠನಾಗಿ ಧನಾಧಿಪತಿ ಕೇಂ ತ್ರಿಕೋಣಗಳಲ್ಲಿದ್ದರೆ ಹೆಂಡತಿಯಿಂದ ವಿಶೇಷ ಧನಲಾಭ. ೧ನೆಯುವನು ಬಲಹೀನನಾ ೨ನೇಯುವನು ರವಿಯುಕ್ತನಾಗಿ ೧೨ರಲ್ಲಿ ಇದ್ದರೆ ರಾಜಕೋಪ, ದಂಡನೆಗಳಿಂದ ದ್ರ ನಾಶ. ೧೨ನೇಯುವನು ೨ರಲ್ಲಿ, ೨-೧೧ನೇಯುವರು ನೀಚರಾಗಿ ೬-೮-೧೨ರಲ್ಲಿ ಇದ್ದ ರಾಜದಂಡನೆಯಿಂದ ಧನಕ್ಷಯ. ಧನಾಧಿಪತಿ ೧೨ರಲ್ಲಿ ಇದ್ದು ಅಶುಭಯುಕ್ತನಾ ರವಿ, ಚಂದ್ರ ದೃಷ್ಟನಾದರೆ ರಾಜರಿಂದ ಧನಕ್ಷಯ. ೨-೧೧ನೆಯುವರು ಕುಜಯು ದೃಷ್ಟರಾದರೂ ಅಥವ ಕ್ರೂರಾಂಶಯುಕ್ತರಾಗಿ ವೀಕ್ಷಿತರಾದರೂ ಚೋರರ ಮೂಲ ಅಶುಭ, ರಾಜರಿಂದ ಧನಕ್ಷಯ, ಧನಾಧಿಪತಿ ಇರುವ ನವಾಂಶನಾಥನು ಇರು ನವಾಂಶಾಧಿಪತಿ ಪಾಪಗ್ರಹದೊಡನೆ ಸೇರಿದರೂ, ೬-೮-೧೨ರಲ್ಲಿ ಇದ್ದರೂ ಬೆಂಕಿ ಕಳ್ಳ ಪ್ರಭುಗಳಿಂದ ಧನನಾಶ. ಧನಾಧಿಪತಿ ೧೨ನೇ ಮನೆಯುವನು ಇರುವ ನವಾಂಶಾ ಪತಿ ಯುಕ್ತ ದೃಷ್ಟನಾದರೆ ಪಾಪಗ್ರಹಗಳು ಕೇಂದ್ರದಲ್ಲಿದ್ದು ಬಲಹೀನರಾಗಿ ರ ನೀಚನಾದರೆ ಕೇವಲ ದರಿದ್ರನಾಗುವನು. ಅಶುಭರು ೨ರಲ್ಲಿ, ೧ನೇಯುವನು ೧೨ರಲ್ಲಿದ ೧೦ ನೇಯುವನು ೧೧ ನೇಯುವನಿಂದ ನೋಡಲ್ಪಟ್ಟರೆ ಕೇವಲ ಸಾಲಗಾರನಾಗುವನ ಧನಾಧಿಪತಿ ರವಿ ಜೊತೆಯಲ್ಲಿ ಸೇರಿ ಅಸ್ತನಾದರೂ, ನೀಚರಾಶಿಯನ್ನು ಹೊಂದಿದರ ೨ರಲ್ಲಿ ಪಾಪಗ್ರಹಗಳಿದ್ದರೂ ಸಾಲವಾಗುವುದು. ಲಾಭಾಧಿಪತಿ ಇರುವ ನವಾಂಶಾ ಪತಿ ೬-೮-೧೨ರಲ್ಲಿ ಇದ್ದು ಕ್ರೂರಷಷ್ಟ್ಯಂಶಗಳನ್ನು ಹೊಂದಿದರೆ ಋಣವಂತನಾಗ ವನು.

## ೩ ಭ್ರಾತೃಭಾವ

೩ ನೆಯುವನೂ ಕುಜನೂ ೧೨ ರಲ್ಲಿದ್ದರೂ, ಪಾಪಕ್ಷೇತ್ರದಲ್ಲಿದ್ದು ಪಾಪದೃ ರಾದರೂ ಭ್ರಾತೃನಾಶ. ೩ನೇಯುವನೂ ಕುಜನೂ ಅಶುಭಯುಕ್ತರಾಗಿ ಬಲಹೀ ರಾದರೆ ವಯಸ್ಸಾದಮೇಲೆ ಭ್ರಾತೃನಾಶ. ೩ ನೇದರಲ್ಲಿ ಶುಭರಿದ್ದು ೩ನೇ ಅಧಿಪ ಬಲಿಷ್ಠನಾಗಿ ಅಂಗಾರಕನು ಬಲಿಷ್ಠನಾದರೆ ಭ್ರಾತೃವೃದ್ಧಿ. ಅಂಗಾರಕನಾದರೂ ೩ನೇ ಅಧಿಪತಿಯಾದರೂ ಶುಭನವಾಂಶದಲ್ಲಿದ್ದು ಶುಭರಿಂದ ನೋಡಲ್ಪಟ್ಟರೆ ಹೆಚ್ಚಾ ಭ್ರಾತೃವೃದ್ಧಿ. ೧-೩ ನೆಯುರಿಗೆ ಮಿತ್ರತ್ವವಿದ್ದರೆ ಸೋದರರಲ್ಲಿ ಮಿತ್ರತ್ವವಿರುವುದ ಶತ್ರುತ್ವವಿದ್ದರೆ ಶತ್ರುಗಳಾಗುವರು. ಕುಜನಾಗಲಿ, ೩ನೆ ಮನೆಯುವನಾಗಲೀ ಬೇ

ಂಶವಲ್ಲಿದ್ದು ಗುರು–ರವಿ- ಕುಜರಿಂದ ನೋಡಲ್ಪಟ್ಟು ಈ ಬೇರೆ ರಾಶಿಗಳನ್ನು ಂದಿದ್ದರೆ ಅಣ್ಣ ತಮ್ಮಂದಿರ ವೃದ್ಧಿ. ಸಮರಾಶಿಗಳಲ್ಲಿ ಸಮ ನವಾಂಶಗಳಲ್ಲಿ ಅಧಿಪತಿ ಅಂಗಾರಕನನ್ನು ಸ್ತ್ರೀಗ್ರಹಗಳಾದ ಚಂದ್ರ ಶುಕ್ರರಿಂದ ನೋಡಲ್ಪಟ್ಟರೆ ೋದರವೃದ್ಧಿ. ಭ್ರಾತೃರಾಶಿ ನವಾಂಶ ಸಂಖ್ಯೆಯಿಂದಾಗಲೀ, ಭ್ರಾತೃಸ್ಥಾನಾಧಿ ಭ್ರಾತೃಕಾರಕನಿರುವ ನವಾಂಶದಿಂದಾಗಲಿ, ಭ್ರಾತೃಸ್ಥಾನದಲ್ಲಿರುವ ಗ್ರಹಗಳಿರುವ ಾಂಶಸಂಖ್ಯೆಯಿಂದಾಗಲೀ, ಅಣ್ಣ ತಮ್ಮಂದಿರ ಸಂಖ್ಯೆಯನ್ನು ಗೊತ್ತುಮಾಡ ಕು. ಈ ವಿಷಯದಲ್ಲಿ ಅನುಭವ ಮತ್ತು ಗ್ರಹಗಳ ಬಲಾಬಲಗಳು ಚೆನ್ನಾಗಿ ದು ಇದ್ದರೆ ಸಂಖ್ಯೆಯು ದೊರಕುವುದು, ಮೂರನೆಯವನಿರುವ ರಾಶ್ಯಧಿಪತಿ ುವ ನವಾಂಶಾಧಿಪತಿ ಕೇಂದ್ರದಲ್ಲಿದ್ದರೂ, ಪಾಪಯುಕ್ತ ವೀಕ್ಷಿತನಾದರೂ ಕರ್ಣ ೀಗವುಂಟಾಗುವುದು.

## ೪ ಚತುರ್ಥಭಾವ

ಒಂದು–ನಾಲ್ಕನೆಯವರು ಕೂಡಿ ೧ರಲ್ಲಿದ್ದರೂ ೪ರಲ್ಲಿದ್ದರೂ ಗೃಹಲಾಭ ೪ನೇ ವನು ಕೇಂದ್ರದಲ್ಲಿ ಬಲಿಷ್ಠನಾದರೆ ಮನೆಗಳಿರುವುವು. ೪ನೇ ಮನೆಯವನು ಶುಭ ಶುಭದೃಷ್ಟನಾದರೆ ಬಂಧುಪೂಜ್ಯ. ನಾಲ್ಕರಲ್ಲಿದ್ದು ೪ನೇ ಮನೆಯವನು ಗುರು ವಾ ಶುಭದೃಷ್ಟನಾದರೆ ಬಂಧುಶ್ರೇಷ್ಠನಾಗುವನು. ಅಶುಭರು ೪ರಲ್ಲಿ ಇದ್ದು ರು ನೋಡದೇ ಹೋದರೂ, ೪ನೆಯವನು ಪಾಪಗ್ರಹಗಳಲ್ಲಿ ಸೇರಿ ಬಲಹೀನನಾ ಬಂಧು ನಿಂಧಿತನಾಗುವನು. ೪ನೇಯವನು ೩ನೇಯವನ ಸಂಗಡ ಸೇರಿದರೂ ನ ಸಂಗಡ ಸೇರಿದರೂ ಅಣ್ಣತಮ್ಮಂದಿರಿಂದ ಭೂಲಾಭ. ಶುಕ್ರನು ೧ರಲ್ಲಿ ಬಲಿಷ್ಟ ದ್ದು ೪ನೆಯವನು ೭ರಲ್ಲಿ ಇದ್ದರೆ ಹೆಂಡತಿ ಮೂಲಕ ಭೂಲಾಭ. ಬಲಿಷ್ಠನಾಗಿ ುವನು ಶುಭದೃಷ್ಟನಾಗಿ ಗುರು ಬುಧರು ೪ರಲ್ಲಿದ್ದು ಪಾಪಗ್ರಹದೃಷ್ಟರಲ್ಲದಿದ್ದರೆ ಮತ್ತು ಧರ್ಮಿಷ್ಠನಾಗುವನು. ೪–೫ರಲ್ಲಿ ಪಾಪಗ್ರಹಗಳಿದ್ದು ಗುರು ೪ನೆಯ ುವನು ಬಲಹೀನನಾದರೆ ಧನಿಕನಾದರೂ ದುಃಖಿಯಾಗುವನು. ೪ನೆಯವನ ಪ ರವಿ ಕುಜರಿದ್ದು ಕ್ರೂರಾಂಶದಲ್ಲಿ ಶುಭದೃಷ್ಟರಿಲ್ಲದಿದ್ದರೆ ದುಃಖಿಯಾಗುವನು, ಕುಜರು ೪ರಲ್ಲಿದ್ದು ಅಶುಭದೃಷ್ಟರಾದರೆ ಭೂಮಿ ಮನೆಗಳನ್ನು ಕಳೆದುಕೊಂಡು ಭ್ರಷ್ಟನಾಗುವನು. ಪಾಪಗ್ರಹಗಳು ಅನೇಕರು ೪ರಲ್ಲಿದ್ದು ೪ ನೆಯವನ ದಿ ಮೂಢಯುಕ್ತನಾದಲ್ಲಿ ಬಹು ಪಾಪಕರ್ಮಾಸಕ್ತನಾಗುವನು. ೪ನೆ ಮನೆ ಭರ ಮಧ್ಯದಲ್ಲಿದ್ದು ಲಗ್ನಾಧಿಪತಿ ಬಲಹೀನನಾಗಿದ್ದರೆ ಅನ್ಯಪುರುಷನಿಗೆ ಹುಟ್ಟಿ ು. ಲಗ್ನವನ್ನಾಗಲೀ ಗುರು ನೋಡಿದರೆ ರವಿಚಂದ್ರರು ಏಕಸ್ಥರಾಗಿ ಪಾಪಿಗಳಾದರೆ ಾತಾ. ೪ರಲ್ಲಿ ಶುಭರಿದ್ದು ಚಂದ್ರನು ಬಲಿಷ್ಠನಾಗಿ ಶುಭವೀಕ್ಷಿತನಾದರೆ ತಾಯಿ ದಿನವಿರಳು. ಚಂದ್ರನು ಬಲಶಾಲಿಯಾಗಿ ಶುಕ್ರ ಬುಧರಿಂದ ನೋಡಲ್ಪಟು

ಕೇಂದ್ರಗಳಲ್ಲಿ ಇದ್ದರೆ ತಾಯಿ ಬಹುಕಾಲ ಜೀವಿಸುವಳು. ೪ರಲ್ಲಿ ಶನಿಯಿದ್ದು ಪಾ
ಗ್ರಹಗಳು ನೋಡಿದರೂ, ಚಂದ್ರನು ಪಾಪಯುಕ್ತನಾಗಿ ಪಿಳರಲ್ಲಿ ಇದ್ದರೂ, ತಾಯ
ಜಾಗ್ರತೆಯಾಗಿ ಸಾಯುವಳು. ನಾಲ್ಕನೇ ಅಧಿಪತಿಯಾಗಿರುವ ನವಾಂಶಾಧಿಪತಿಯ
ಯಾವ ನವಾಂಶದಲ್ಲಿರುವನೋ ಆ ರಾಶ್ಯಧಿಪತಿಯ ದಶಾಭುಕ್ತಿಗಳಲ್ಲಿ ಮಾತೃಮರ
ಸೂಚನೆ ಹೇಳಬೇಕು. ೧ರಲ್ಲಿ ಗುರು ಶುಕ್ರರು ಇದ್ದರೆ ಚಿತ್ತಶುದ್ಧಿಯುಂಟು. ರಾಹ
ಪಾಪದೃಷ್ಟಯುತನಾಗಿ ೪ರಲ್ಲಿ ಇದ್ದರೆ ಬಹಿಶ್ಯಾಚಿಯನ್ನು ತೋರಿಸುವನು, ೪ನೆಯ
ನಿಗೂ ೧ನೆಯವನಿಗೂ ಮಿತ್ರತ್ವವಿದ್ದರೂ ಚಂದ್ರನಿಗೂ ೧ನೆಯವನಿಗೂ ಸ್ನೇಹ
ದ್ದರೂ ತಾಯಿಯಲ್ಲಿ ವಿಶ್ವಾಸವಿರುವುದು. ೪ನೆಯವನು ಶುಭವೀಕ್ಷಿತನಾಗಿ ಕೇಂ
ಗಳಲ್ಲಿದ್ದರೆ ಮಾತೃವಿಶ್ವಾಸ. ೧-೪ ನೆಯವರು ೧೨ರಲ್ಲಿದ್ದರೆ ಮಾತೃ ವಿರೋಧ.

## ೫ ಪಂಚಮ ಭಾವ

೫ನೆಯವನು ೫ರಲ್ಲಿ ಇದ್ದು ಗುರುದೃಷ್ಟನಾದರೆ ಪುತ್ರರುಂಟು. ೧ನೆಯವ
೫ರಲ್ಲಿದ್ದು ೫ನೆಯವನು ಬಲಿಷ್ಠನಾಗಿ ಗುರು ಶುಭನಾದರೆ ಖಂಡಿತವಾಗಿ ಮಕ್ಕಳುಂಟು
೫ನೇಯವನು ೨ರಲ್ಲಿ ಬಲಿಷ್ಠನಾಗಿದ್ದು ಗುರುವಿನಿಂದ ನೋಡಲ್ಪಟ್ಟರೆ ಪುತ್ರಲಾಭ
೧ ನೇಯವನು ೭ ರಲ್ಲಿ, ೨ನೇಯವನು ಲಗ್ನದಲ್ಲಿ, ೭ ನೇಯವನು ೯ರ
ಇದ್ದರೆ ಪುತ್ರರುಂಟು. ೫ ನೇ ಮನೆ ಅಶುಭ, ಮಧ್ಯಮವಾದರೂ ಅಥವಾ ೫ನ
ಯವನು ಗುರು ಅಶುಭರಾದರೂ ಪುತ್ರನಾಶ. ೯-೫-೭ ನೇಯವರು ಇರುವ ನವಾ
ಶಾಧಿಪತಿಗಳು ಪಾಪಾಂಶದಲ್ಲಿ ಪಾಪಯುಕ್ತರಾದರೆ ಪುತ್ರನಾಶ. ೫ ನೇಯವನು ನೀ
ಮೂಢಾದಿ ದೋಷಯುಕ್ತನಾಗಿ ಕ್ರೂರಾಂಶಗಳನ್ನು ಹೊಂದಿ ಪಾಪದೃಷ್ಟನಾದರ
೩-೬-೧೨ರಲ್ಲಿ ಇದ್ದರೂ ಪುತ್ರನಾಶ. ೫ರಲ್ಲಿ ಬುಧನಿದ್ದರೂ ೫ನೇ ಅಧಿಪತಿಯಾದರು
ಶುಭರು. ಪಂಚಮವನ್ನು ನೋಡಿದರೆ ಬುದ್ಧಿವಂತನೂ ನೀತಿವಂತನೂ ಆಗುವನು
೫ರಲ್ಲಿ ಪಾಪಗ್ರಹಗಳು ಇದ್ದರೂ ಬುಧನು ನೀಚನಾಗಿ ಬಲಹೀನನಾದರೂ ಬುದ್ಧಿ
ನಾಶ. ೫ರಲ್ಲಿ ಶನಿ ಇದ್ದು ೫ ನೆಯವನು ಶನಿಯಿಂದ ನೋಡಲ್ಪಟ್ಟರೆ ಬುದ್ಧಿಜಾಡ್ಯ
೫ರಲ್ಲಿ ಪುರುಷಗ್ರಹವಿದ್ದರೂ, ೫ನೇಯವನು ಪುರುಷಾಂಶೆಯನ್ನು ಹೊಂದಿ ಬಲವಾ
ಪುರುಷಗ್ರಹಗಳಿಂದ ನೋಡಲ್ಪಟ್ಟರೂ, ಜಾತಕನಿಗೆ ಆದಿಯಲ್ಲಿ ಸುಪುತ್ರಯೋಗವು
ಟಾಗುವದು. ೫ರಲ್ಲಿ ಸ್ತ್ರೀಗ್ರಹವಿದ್ದು ಬಲವಾದ ಸ್ತ್ರೀಗ್ರಹಗಳಿಂದ ನೋಡಲ್ಪಟ್ಟು, ೫
ಮನೆಯವನು ಸ್ತ್ರೀ ನವಾಂಶಗಳನ್ನು ಹೊಂದಿ ಇದ್ದಲ್ಲಿ ಪ್ರಥಮದಲ್ಲಿ ಉತ್ತಮವಾ
ಕನ್ಯಾ ಜನನವಾಗುವುದು. ಗುರು ಇರುವ ರಾಶಿಯಲ್ಲಿ ಅಷ್ಟಕವರ್ಗ ಶೋಧ್ಯಬಿಂ
ಸಂಖ್ಯೆಯಷ್ಟು ಆಗಲಿ, ೫ರಲ್ಲಿ ಇರುವ ಬಿಂದು ಸಂಖ್ಯೆಯಷ್ಟಾಗಲಿ ಅಷ್ಟು ಮಕ್ಕಳ
ಇರುವರೆಂದು ಹೇಳಬೇಕು. ೧-೫ನೆಯವರಿಗೂ ಗುರುವಿಗೆ ಮಿತ್ರತ್ವ ಸಮತ್ವ ನೋ
ಜಾತಕನಿಗೂ ಇವನ ಪುತ್ರರಿಗೂ ಸ್ನೇಹ ದ್ವೇಷಾದಿಗಳನ್ನು ತಿಳಿಯಬೇಕು.

## ೬ ಷಷ್ಠ ಭಾವ

ಆರನೇಯವನು ಅಶುಭಯುಕ್ತನಾಗಿ ೧೦ರಲ್ಲಿ ೧-೮ರಲ್ಲಿ ಇದ್ದರೆ ವ್ರಣಶರೀ
ಆಗುವನು. ೧ನೇಯವನೂ ಕುಜನೂ ಬುಧನೂ ಕೂಡ ೪-೧೨ರಲ್ಲಿ ಇದ್ದರೆ ಅಪಾ

ೀಗವುಂಟು. ಚಂದ್ರ ಬುಧ ಲಗ್ನಾಧಿಪತಿಗಳೂ ರಾಹು ಕೇತುಯುಕ್ತರಾದರೆ ೀಗಾಂಗಿಯಾಗುವನು. ೧-೬ನೇಯುವರು ರವಿಯುಕ್ತರಾದರೆ ಜ್ವರಾದಿ ಬಾಧೆ ಂದಲೂ, ಚಂದ್ರಯುಕ್ತರಾದರೆ ಬಲಾದಿ ಗಂಡಗಳಿಂದಲೂ, ಕುಜಯುಕ್ತರಾದರೆ ುದ್ಧದಿಂದಲೂ, ಸಿಡುಬು ಮೊದಲಾದ ರೋಗಗಳಿಂದಲೂ, ಬುಧನೊಡನೆ ಇದ್ದರೆ ತ್ತಭ್ರಮೆಯಿಂದಲೂ, ಗುರುವಿನೊಡನೆ ಇದ್ದರೆ ತಿಳಿಯದ ಅನೇಕ ರೋಗಗಳಿಂದಲೂ ಕ್ರನೊಡನೆ ಇದ್ದರೆ ಹೆಂಡತಿಯಿಂದಲೂ, ಶನಿಯೊಡನೆ ಇದ್ದರೆ ನೀಚವಾದ ರೋಗಗ ದಲೂ ಅಪತ್ತು ಸಂಭವಿಸುವುದು. ಆರನೇಯುವನು ಕೇಂದ್ರದಲ್ಲಿದ್ದು ಪಾಪದೃಷ್ಟ ದರೂ ೬ ರಲ್ಲಿ ಪಾಪಗ್ರಹಗಳಿದ್ದರೂ ಶತ್ರುಬಾಹುಳ್ಯವಾಗಿರುತ್ತಾರೆ. ೧ನೇಯುವನು ರಲ್ಲಿ ೬ನೇಯುವನು ೧ರಲ್ಲಿ ಇದ್ದರೆ ಶತ್ರುಬಾಧೆ, ೬ನೇಯುವನು ಅಶುಭಯುಕ್ತ ಧ್ಯನಾದರೆ ತುಂಬಾ ಶತ್ರುಪೀಡೆಯುಂಟು. ೬ನೆಯುವನು ೬-೮-೧೨ರಲ್ಲಿ ಇದ್ದರೂ ತ್ರುಗ್ರಹಯುಕ್ತನಾದರೂ ಲಗ್ನಾಧಿಪತಿ ಬಲಯುಕ್ತನಾದರೂ ಶತ್ರುನಾಶ. ೬ ನೇ ುವನು ಶುಭಯುಕ್ತ ಮಧ್ಯದೃಷ್ಟನಾದರೆ ಶತ್ರುಗಳು ಮಿತ್ರರಾಗಿ ಲಾಭ ಉಂಟು ಾಡುವರು. ೧-೬ನೇಯುವರು ಬಲಹೀನರಾಗಿ ಶುಭಗ್ರಹಗಳಿಂದ ನೋಡಲ್ಪಟ್ಟರೆ ತ್ರುಗಳು ಮಿತ್ರರಾಗುವರು ೧ ನೇಯುವನು ೭ ರಲ್ಲಿ ಇದ್ದರೂ ೬ ನೇಯುವನಿಂದ ೃಷ್ಟನಾದರೂ ಇಬ್ಬರೂ ಲಗ್ನದಲ್ಲಿ ಇದ್ದರೂ ಜ್ಞಾತಿಬಾಧೆ ತುಂಬಾ ಇರುವದು. ಗುರು ುಕ್ರರು ಲಗ್ನದಲ್ಲಿದ್ದು ೬ನೆಯುವನಿಂದ ಕೂಡಲ್ಪಟ್ಟ ಕುಜ-ಶನಿ-ರಾಹುಗಳಿಂದನೋಡ ್ಪಟ್ಟರೆ ಜಾತಿ ಪೀಡೆ ತುಂಬಾ ಉಂಟು, ೯ನೇಯುವನು ೬ರಲ್ಲಿ ಇದ್ದರೂ ೬ ನೇ ುವನಿಂದ ನೋಡಲ್ಪಟ್ಟರೂ ಜ್ಞಾತಿ ಬಾಧೆ.

## ೭ ಕಳತ್ರಭಾವ

ಶುಕ್ರನು ೭ರಲ್ಲಿ ಇದ್ದರೆ ಬಹು ಕಾಮಿ. ಬುಧನಿದ್ದರೆ ಅನ್ಯರ ಹೆಂಡರಲ್ಲಿ ಆಶೆ. ುರುವಿದ್ದರೆ ತನ್ನ ಹೆಂಡತಿಯಲ್ಲಿ ಆಶೆ. ಶನಿಯಿದ್ದರೆ ಕೆಟ್ಟ ಹೆಂಡತಿಯುಳ್ಳವನು. ುಜನಿದ್ದರೆ ಬಹು ಸ್ತ್ರೀ ಸಂಭೋಗಿ ರವಿ ಇದ್ದರೆ ಅನೇಕ ಹೆಂಡರುಳ್ಳವನು. ೧ ದಲ್ಲಿ -೭-೬ನೇಯುವರು ಶುಕ್ರನೊಡನೆ ಸೇರಿದಲ್ಲಿ ದುರ್ಮಾರ್ಗಿಯಾಗಿ ವ್ಯಭಿಚರಿಸುವನು ನೇಯುವನು ರಾಹು ಕೇತುಯುಕ್ತನಾದರೆ ವ್ಯಭಿಚಾರಿ. ೧೦-೨-೭ನೇಯುವರು ೧೧ರಲ್ಲಿ ದ್ದರೆ ವ್ಯಭಿಚಾರಿ. ೪ ರಲ್ಲಿ ಒಂದು ಗ್ರಹವಿದ್ದರೂ ವ್ಯಭಿಚಾರಿ. ೭ನೇ ಯುವನು ಾಪಯುಕ್ತನಾಗಿ ೨ ನ್ನು ಕುಜನು ನೋಡಿದರೆಜಾರಪುತ್ರರುಂಟಾಗುವರು. ೫-೯-೭ನೆ ುನೆಯುವರು ೬-೮-೧೨ರಲ್ಲಿ ಬಲಹೀನರಾಗಿ ಶುಭಗ್ರಹಗಳಿಂದ ನೋಡಲ್ಪಟ್ಟರೆ ಅನೇಕ ಂಡರಿದ್ದರೂ ಪುತ್ರಹೀನನಾಗುವನು. ಕ್ಷೀಣ ಚಂದ್ರನು ಪಾಪಯುಕ್ತನಾಗಿ ೭ರಲ್ಲಿ ದ್ದರೂ ಲಗ್ನದಲ್ಲಿ ಪಾಪಗ್ರಹಗಳಿದ್ದು ೭ನೇ ಯುವನು ಅಲ್ಲಿ ಕೂಡಿದರೂ ಅನ್ಯರ ಂಡರನ್ನು ಕೆಡಿಸುವನು. ೭ರಲ್ಲಿ ಇದ್ದ ೭ನೇಯುವನು ಪಾಪಯುಕ್ತನಾಗಿ ಶುಕ್ರನು

ಬಲಹೀನನಾದರೆ ಹೆಂಡತಿ ಗರ್ಭಿಣಿಯಾಗಿ ಸತ್ತು ಹೋಗುವಳು. ಶುಕ್ರನೂ ಚಂದ್ರನ ೪ರಲ್ಲಿ ಇದ್ದರೆ ಬಂಧನಾದಿಗಳಿಂದ ಕಳತ್ರ ಸಾಯುವಳು. ೨–೭ನೇ ಯವರು ಸ್ವಕ್ಷೇ ಗಳಲ್ಲಿದ್ದು ಬೇರೆ ಗ್ರಹಗಳಿಂದ ಯುಕ್ತರಲ್ಲದಿದ್ದರೆ ಏಕ ಕಳತ್ರ. ಬೇರೆ ಗ್ರಹಗಳಿದ್ದ ಆ ಸಂಖ್ಯೆಯನ್ನು ಅನುಸರಿಸಿ ಕಳತ್ರಗಳನ್ನು ಹೇಳಬೇಕು. ಕಳತ್ರಾಧಿಪತಿ ಬ ಗುಣಯುಕ್ತನಾಗಿ ಉಚ್ಚನಾಗಿ ವಕ್ರಾದ್ಯವಸ್ಥೆಗಳನ್ನು ಹೊಂದಿಯಿದ್ದರೆ ಅನೇಕ ಹೆಂ ರಿರುವರು. ಲಗ್ನಾಧಿಪತಿ ೧೨ ರಲ್ಲಿ ೭–೨ರಲ್ಲಿ ಪಾಪಗ್ರಹಗಳಿದ್ದರೆ ದ್ವಿಕಳತ್ರಯೋಗ ೭ ನೇಯವನು ಶುಭಯುಕ್ತನಾಗಿ ನೀಚ ಶತ್ರು ಕ್ಷೇತ್ರಗಳಲ್ಲಿದ್ದು ಪಾಪಗ್ರಹವು ೭ ರ ಇದ್ದರೆ ಇಬ್ಬರು ಹೆಂಡರು. ಶುಕ್ರನು ನೀಚ ಶತ್ರುಕ್ಷೇತ್ರಗಳಲ್ಲಿದ್ದು ಶುಭ ದುಷ್ಟನಾದ ಕಳತ್ರದ್ವಯ. ಶುಕ್ರನಿಗೂ ಚಂದ್ರ–ಗುರು–ಬುಧರ ಪೈಕಿ ಬಲಿಷ್ಠರಾದವರು ಯಾರೊ ಅವರಿಗೂ ಮಧ್ಯದಲ್ಲಿ ಎಷ್ಟು ಬಲವುಳ್ಳ ಗ್ರಹಗಳು ಇರುವವೋ ಅಷ್ಟು ಕಳತ್ರಗಳ ಉಂಟೆಂದು ಹೇಳಬೇಕು. ೭–೨ನೆ ಯವರಿಗೆ ಅಶುಭ ದುರ್ಯೋಗಗಳಿದ್ದರೆ ಕಳತ್ರ ನಷ್ಟ. ೧೨ ರಲ್ಲಿ ಕುಜ ೨–೮ ರಲ್ಲಿ ಪಾಪಗ್ರಹಗಳಿದ್ದು ಆ ರಾಶ್ಯಾಧಿಪತಿಗಳಿಂ ನೋಡಲ್ಪಡದೆ ಇದ್ದರೆ ಹೆಂಡತಿ ಸಾಯುವಳು. ೨–೭ ರಲ್ಲಿ ಅನೇಕ ಪಾಪಗ್ರಹಗಳಿದ್ದು ಆ ಮನೆಯವರನ್ನು ಪಾಪಗ್ರಹಗಳು ನೋಡದೆ ಇದ್ದಾಗ್ಯೂ ೧೨–೭ರಲ್ಲಿ ಅಶುಭರಿದ್ದ ತ್ರಿಕಳತ್ರ. ೭ನೇಯವನು ನೀಚ ಶತ್ರು ಕ್ಷೇತ್ರಗಳಲ್ಲಿದ್ದರೆ ತ್ರಿಕಳತ್ರ. ೧ ೭ ನ ಯವರಿಗೆ ಮಿತ್ರತ್ವವಿದ್ದರೆ ದಂಪತಿಗಳಾಗಿ ಅನ್ಯೋನ್ಯವಾಗಿರುವರು. ಇಲ್ಲದಿದ್ದರೆ ಶತ್ರುತ್ವವಿರುವುದು. ಕಳತ್ರ ಬಣ್ಣ ಗುಣ ರೂಪಗಳನ್ನು ೭ ನೇ ರಾಶಿಯಿಂದಲೂ ಅಲ್ಲಿರುವ ಗ್ರಹಗಳಿಂದಲೂ ಕಳತ್ರಕಾರಕ ಶುಕ್ರನ ಬಲದಿಂದಲೂ ಊಹಿಸಿ ಹೇಳಬೇಕು.

## ೮ ಅಷ್ಟಮ ಭಾವ

ಲಗ್ನದಲ್ಲಿ ಶುಭರಿದ್ದು ಕುಜನು ೧೦ ರಲ್ಲಿದ್ದರೆ ಸೋದರಮಾವಂದಿರಿಗೆ ಗಂಡ ಶನಿ ೧೦ ರಲ್ಲಿದ್ದರೆ ಜ್ಞಾತಿಗಳಿಗೆ ಮರಣ. ಕ್ಷೀಣ ಚಂದ್ರನು ಪಾಪಗ್ರಹಯುಕ್ತನಾಗಿ ೧೨ ರಲ್ಲಿದ್ದರೆ ಜ್ಞಾತಿವರ್ಗದಲ್ಲಿ ಅವರ ತಾಯಿಗಳಿಗೆ ತೊಂದರೆ. ಚಂದ್ರ ರವಿಗಳ ಲಗ್ನದಲ್ಲಿದ್ದು ೧೨ರಲ್ಲಿ ಪಾಪಗ್ರಹಗಳಿದ್ದು ಶುಭರಿಂದ ನೋಡಲ್ಪಡದೆ ಇದ್ದರೆ ಜಾತಕನ ಕ್ಷಿಪ್ರದಲ್ಲಿ ಸಾಯುವನು. ಲಗ್ನಾಧಿಪತಿ ಕೇಂದ್ರದಲ್ಲಿದ್ದು ಶುಭದೃಷ್ಟನಾದರೂ, ಶುಭ ಬಲಿಷ್ಠರಾದವರು ಕೇಂದ್ರ ತ್ರಿಕೋಣದಲ್ಲಿದ್ದರೂ ಗುರು-ಶುಕ್ರ–ಬುಧ-ಪೂರ್ಣಚಂದ್ರರ ಲಗ್ನವನ್ನು ನೋಡಿದರೂ, ೧ನೇಯವನೂ ಶನಿಯೂ ಶುಭಾಂಶಗಳನ್ನು ಹೊಂ ಶುಭಯುಕ್ತನಾದರೂ ದೀರ್ಘಾಯುವಾಗುವನು. ೮ರಲ್ಲಿ ಅಶುಭರಿದ್ದರೆ ಗುಹ್ಯರೋ ಮತ್ತು ಅಧಿಕ ಭೋಜನವು. ಶುಭರಿದ್ದರೆ ಸೂಕ್ಷ್ಮಾನ್ನ ಭೋಜನವು. ೮ ನೇ ಮನೆಯು ಚರವಾಗಿ ಆ ಮನೆಯವನು ಚರದಲ್ಲಿದ್ದರೆ ದೂರದೇಶವಲ್ಲಿ ಮರಣ. ೮

ಯು ಸ್ಥಿರವಾಗಿ ಸ್ಥಿರರಾಶಿಯಲ್ಲಿದ್ದರೆ ತನ್ನ ಮನೆಯಲ್ಲಿ ಮರಣ. ಆ ಮನೆಯೂ ಯವನೂ ದ್ವಿಸ್ವಭಾವವಾಗಿದ್ದರೆ ಸಂಚಾರ ಕಾಲದಲ್ಲಿ ಮರಣ.

## ೯ ನವಮಭಾವ

ಒಂಭತ್ತು ಮತ್ತು ೧-ಳನೇ ಯವರೂ, ಚಂದ್ರನೂ ಬಲಹೀನನಾದರೆ ಹುಟ್ಟಿ ಗ್ಯೆ ತಾಯಿಗೆ ಮಹಾ ವಿಪತ್ತು ಸಂಭವಿಸುವದು. ೬ ನೇ ಅಧಿಪತಿ ಅಥವಾ ದ್ರನೂ ಬಲಹೀನನಾಗಿ ೧ ರಾಶಿಯಲ್ಲಿದ್ದರೆ ಬಾಣಂತಿ ಮಗುವೂ ಕೂಡ ಜಾಗ್ರತೆ ಲ್ಲಿ ಸಾಯುವರು. ಚಂದ್ರನೂ ೩ನೇ ಯವನೂ ೬-೮-೧೨ ರಲ್ಲಿ ಇದ್ದರೆ ಅನ್ಯರಲ್ಲಿ ಲೆಯುನ್ನುಣ್ಣುವರು. ೯ನೇ ಯವನೂ ರವಿ ಶನಿಗಳೂ ೬ರಲ್ಲಿ ಇದ್ದರೆ ತಂದೆಯು ತ್ರಿಯಲ್ಲಿ ಸಾಯುವನು. ೧ನೇಯವನೂ, ರವಿಯೂ, ೯ನೇಯವನೂ ಕೂಡ ಬಲ ಗಳಾದರೆ ತಂದೆಯು ಮಾತನ್ನು ಕೇಳುವ ಮಗನಾಗುವನು. ತಂದೆಯು ಲಗ್ನಕ್ಕೆ ನೇ ಲಗ್ನದಲ್ಲಿ ಹುಟ್ಟಿದವನು ಪಿತೃಗುಣಗಳನ್ನೆಲ್ಲಾ ಹೊಂದುವನು. ಪಿತ್ರಾರ್ಜಿತದ ವ್ಯವು ಕೂಡ ಉಳ್ಳವನಾಗುವನು. ತಂದೆಯ ಲಗ್ನಕ್ಕೆ ೬-೮ನೇ ಮನೆಯು ಲಗ್ನ ಗಿ ಹುಟ್ಟಿದರೆ ತಂದೆಗೆ ವಿರೋಧಿಯಾಗುವನು. ೫-೯ ನೇಯವರು ಸೇರಿ ಶುಭ ಕ್ಷಿತರಾಗಿ ೫ ರಲ್ಲಿದ್ದರೆ ಮಕ್ಕಳ ಭಾಗ್ಯವನ್ನು ತಂದೆಯು ಅನುಭವಿಸುವನು. ೭-೯ನೇ ವರು ಒಬ್ಬರಿಗೊಬ್ಬರು ಅನ್ಯೋನ್ಯರಾಗಿದ್ದು ಯುಕ್ತದೃಷ್ಟರಾದರೆ ಕಳತ್ರ ಭಾಗ್ಯ ವದು. ೯ ನೇಯವನು ೮ ರಲ್ಲಿದ್ದು ಶತ್ರು ನೀಚಾದಿ ಗ್ರಹಗಳಿಂದ ನೋಡಲ್ಪಟ್ಟರೆ ಗ್ಯಹೀನ. ೯ ರಲ್ಲಿ ಅನೇಕ ಪಾಪಗ್ರಹಗಳಿದ್ದು ೯ನೇ ಯವನೂ ಲಗ್ನಾಧಿ ಯೂ ಬಲಹೀನರಾದರೆ ಮಹಾ ದರಿದ್ರನಾಗುವನು. ಇವರುಗಳು ಗುರು ಶುಕ್ರ ಷ್ಟರಾದರೆ ಹೋದ ಭಾಗ್ಯವು ಪುನಃ ಬರುವುದು. ೨ ನೇಯವನು ೧೦ರಲ್ಲಿ ೧೦ನೇ ವನು ೯ರಲ್ಲಿ ೯ನೇ ಯವನು ೨ ರಲ್ಲಿ ಇದ್ದು ೧೦ನೇ ಯವನಿಂದ ಯುಕ್ತ ದೃಷ್ಟ ರೆ ಧನ ಯಶಸ್ಸುಗಳುಂಟಾಗಿರುವನು.

## ೧೦ ದಶಮಭಾವ

ಹತ್ತರಲ್ಲಿ ಶನಿ ರವಿಗಳಿದ್ದು ಪಾಪಾಂಶಯುಕ್ತರಾದರೆ ಅಪಕೀರ್ತಿ ಬರುವುದು. ರಲ್ಲಿ ಶುಭಗ್ರಹಗಳಿದ್ದು ೧೦ನೇಯವನ ಸಂಗಡ ಶುಭರು ಸೇರಿದರೆ ಸಾಹಸ, ರ್ಥ, ಕೀರ್ತಿವಂತನಾಗಿಯೂ, ಆಡಿದ ಮಾತು ತಪ್ಪದೆ ಇರುವನಾಗಿಯೂ ಇರು . ೧೦ರಲ್ಲಿ ಗುರುವಿದ್ದರೂ, ೧೦ನೇಯವನು ಶುಭಮಧ್ಯನಾದರೂ ಇಂಗಿತಜ್ಞ ಗುವನು. ೧೦ರಲ್ಲಿ ಅಶುಭರಿದ್ದರೂ, ೧೦ ನೆಯವನು ಪಾಪಯುಕ್ತ ದೋಷಿಯೂ ೂ ಪಾಪ ನವಾಂಶಗಳನ್ನು ಹೊಂದಿದ್ದರೂ ಮಾನಹೀನನಾಗುವನು, ೧೦ನೇ ವನು ಚರರಾಶಿಯಲ್ಲಿ ಇದ್ದರೆ ಸಂಚಾರಮಾಡುವನು. ಸ್ಥಿರರಾಶಿಯಲ್ಲಿ ಇದ್ದರೆ

ಸ್ಥಿರವಾಗಿರುವ ಬುದ್ಧಿಯುಳ್ಳವನು. ದ್ವಿಸ್ವಭಾವಾಂಶಗಳಲ್ಲಿದ್ದರೆ ಮೃಗಯಾತ್ರಾ ಗಳಲ್ಲಿ ಆಸಕ್ತನಾಗುವನು. ೧೦ ರಲ್ಲಿ ರವಿಯಿದ್ದರೆ ಪಿತೃದ್ರವ್ಯ, ಚಂದ್ರನಿದ್ದರೆ ಮಾ ದ್ರವ್ಯ, ಕುಜನಿದ್ದರೆ ಶತ್ರುದ್ರವ್ಯ, ಬುಧನಿದ್ದರೆ ಮಿತ್ರದ್ರವ್ಯ, ಗುರುವಿದ್ದರೆ ಭ್ರಾ ಜ್ಞಾತಿಗಳ ದ್ರವ್ಯ, ಶುಕ್ರನಿದ್ದರೆ ಸ್ತ್ರೀಜನರಿಂದ ದ್ರವ್ಯಲಾಭ, ೧೨ ರಲ್ಲಿ ಗ್ರಹ ದಿದ್ದರೆ ಚಂದ್ರ ರವಿ ಲಗ್ನಗಳಿಗೆ ೧೦ ನೇಯುವನಿರುವ ನವಾಂಶಾಧಿಪತಿಯನ್ನು ನೋ ಜೀವನೋಪಾಯನ್ನು ಹೇಳಬೇಕು. ದಶಮಾಧಿಪತಿ, ಇವನ ನವಾಂಶಾಧಿ ರವಿಯಾದರೆ ಸುಗಂಧದ್ರವ್ಯ ಚಿನ್ನ ತುಬಟ ಅವರಿಂದ ಮಾಡಲ್ಪಟ್ಟ ಬಟ್ಟೆಗಳ ಮತ ಔಷಧಿಗಳ ಕ್ರಯ ವಿಕ್ರಯದಿಂದಲೂ, ಚಂದ್ರನಾದರೆ ವ್ಯವಸಾಯ ಶಂಖ ಮುಕ್ತ ಪ್ರವಾಳಾದಿಗಳ ಕ್ರಯವಿಕ್ರಯದಿಂದಲೂ, ಸ್ತ್ರೀಯರನ್ನು ಆಶ್ರಯಿಸುವದ್ದರಿಂದಲೂ ಕುಜನಾದರೆ ಬೆಳ್ಳಿ ಬಂಗಾರ ತಾಮ್ರ ಕಂಚು ಮುಂತಾದವುಗಳ ಕ್ರಯವಿಕ್ರಯ ದಿಂದಲೂ ಅಗ್ನಿ ಕಾರ್ಯಗಳಿಂದಲೂ ಆಯುಧಕಾರ್ಯಗಳಿಂದಲೂ, ಬುಧನಾದ ಲಿಪಿ ಗಣಿತಾದಿ ಕಾರ್ಯ ಶಿಲ್ಪಿಗಳಿಂದಲೂ, ಗುರುವಾದರೆ ಬ್ರಾಹ್ಮಣ ದೇವರು ಮೊದಲ ದವರ ಸಮೂಹಕ್ಕೆ ಯಜಮಾನನಾಗಿಯೂ ಧರ್ಮಕಾರ್ಯಗಳಿಂದಲೂ, ಶುಕ್ರನಾದ ವಜ್ರ ಕೆಂಪು ಮೊದಲಾದವುಗಳ ಕ್ರಯ ವಿಕ್ರಯದಿಂದಲೂ ಬೆಳ್ಳಿ ಮೊದಲಾದ ಲೋ ಗಳಿಂದಲೂ ಆಕಳು ಮೊದಲಾದವುಗಳಿಂದಲೂ, ಶನಿಯಾದರೆ ಮಾರ್ಗಾಯಾ ದಿಂದಲೂ ಜೀವಜಂತು ವಧೆಯಿಂದಲೂ ದ್ರವ್ಯ ಸಂಪಾದನೆಯಾಗುವುದೆಂದ ಹೇಳಬೇಕು.

## ೧೧ ಏಕಾದಶಭಾವ

ಹನ್ನೊಂದನೆಯುವನಿರುವ ನವಾಂಶಾಧಿಪತಿ ಶುಭಯುಕ್ತನಾಗಿ ೨ನೇ ಯುವನಿಂ ನೋಡಲ್ಪಟ್ಟರೂ, ೧೧ನೇಯುವನಿರುವ ತ್ರಿಂಶಾಂಶಾಧಿಪತಿ ಶುಭನಾಗಿ ೧೦ನೇ ಮ ಯುವನಿಂದ ನೋಡಲ್ಪಟ್ಟರೂ ಧನ ಲಾಭ. ೧೧ನೇಯುವನಿರುವ ರಾಶಿ ಯಾ ದಿಕ್ಸಂಜ್ಞ ಉಳ್ಳದ್ದೋ ಆ ದಿಕ್ಕಿನಲ್ಲಿ ಧನ ಲಾಭ. ೧೧ನೇ ಮನೆಯು ಯಾ ದಿಕ್ಕನ್ನು ಸೂಚಿಸುವುದೋ ಆ ದಿಕ್ಕಿನಲ್ಲಿ ಲಾಭ. ೧೧ನೇಯುವನು ಪುರುಷಗ್ರಹವಾ ಶುಭಯುಕ್ತನಾದರೆ ಅಣ್ಣ ತಮ್ಮಂದಿರು ಇರುವರು. ಸ್ತ್ರೀ ಗ್ರಹವಾಗಿ ಶುಭಯು ನಾದರೆ ಅಕ್ಕತಂಗಿಯರು ಇರುವರು. ೧೧ನೇ ಮನೆಯುವನು ಪಾಪಗ್ರಹಯುಕ್ತನಾ ನೀಚ ಶತ್ರು ಕ್ಷೇತ್ರಗಳನ್ನು ಹೊಂದಿ ಇದ್ದರೆ ದ್ರವ್ಯ ನಷ್ಟ ಸಂಭವಿಸುವುದು. ೧೧ ಮನೆಯುವನು ಶುಭಯುಕ್ತನಾಗಿ ಆ ಮನೆಯುವನು ಒಳ್ಳೇ ಗ್ರಹದ ಸಂಗಡ ಸೇರಿದ್ದ ಉತ್ತಮವಾದ ಸ್ನೇಹಿತರು ದೊರಕುವರು. ಅವರಿಗೆ ನೀಚಾದಿ ಅವಸ್ಥೆಗಳುಂಟಾ ಇದ್ದರೆ ಸ್ನೇಹಿತರಿಂದ ನಷ್ಟ ಉಂಟಾಗುವುದು.

———

# ೧೨ ದ್ವಾದಶಭಾವ

ಹನ್ನೆರಡನೇಯವನು ಪಾಪಯುಕ್ತ ದೃಷ್ಟನಾದರೂ, ಹನ್ನೆರಡನೇಯವನ ಸಂಗಡ ಶುಭರಿದ್ದರೂ ಅಸದ್ವ್ಯಯವಾಗುವುದು. ೧೨ನೆಯವನಿರುವ ನವಾಂಶಾಧಿಪತಿ ಶುಭ ಾಗಿದ್ದರೂ, ಶುಭ ಸಂಬಂಧಿಯಾದರೂ ಸನ್ಮಾರ್ಗದಲ್ಲಿ ವ್ಯಯ. ೧೦ ನೇಯವನಿಗೆ ಾಪಬಂಧು ೧೨ನೇ ಯವನಿಂದ ದೃಷ್ಟಯುಕ್ತನಾದರೂ ದುರ್ಮಾರ್ಗದಲ್ಲಿ ಧನವ್ಯಯ. ೨ನೇ ಯವನು ೫-೯ ರಲ್ಲಿದ್ದರೂ ಪಾಪಗ್ರಹಗಳು ಕೇಂದ್ರಗಳನ್ನು ನೋಡಿದರೂ, ್ರೂರ ಷಷ್ಟಂಶಗಳನ್ನು ಹೊಂದಿ ಇದ್ದರೂ ದುರ್ಮಾರ್ಗದಲ್ಲಿ ಧನವ್ಯಯ. ೧೨ ನೇ ುವನು ಬಲಹೀನನಾಗಿ ಶತ್ರುಗಳಿಂದ ನೋಡಲ್ಪಟ್ಟು ಪಾಪಯುಕ್ತನಾದರೆ ಶತ್ರು ಮೂಲಕ ಧನನಾಶ. ೧೨ನೇಯವನು ದುರ್ಬಲನಾಗಿ ೭ ನೇಯವನಿಂದ ನೋಡ ್ಪಟ್ಟರೆ ಹೆಂಗಸಿನಿಂದ ದ್ರವ್ಯನಾಶ. ೧೨ನೆಯವನು ಅಂಗಾರಕನಿಂದ ನೋಡಲ್ಪಟ್ಟರೂ, ುಕ್ತ ದೃಷ್ಟರಾದರೂ ಭ್ರಾತೃ ಮೂಲಕ ಧನನಾಶ. ೫ನೇ ಯವನು ಯುಕ್ತ ದೃಷ್ಟ ಾದರೆ ಪುತ್ರಮೂಲಕವಾಗಿ ನಷ್ಟ. ೫ರಲ್ಲಿ ಶುಕ್ರನಿದ್ದರೂ ಅಥವಾ ೫ನೇ ಮನೆ ುನ್ನು ನೋಡಿದರೂ, ದೇವೀಪೂಜಾಸಕ್ತನಾಗುವನು. ೫ ನೇ ಮನೆಯನ್ನು ಪುರುಷ ್ರಹಗಳು ನೋಡುತ್ತಲಿದ್ದರೆ ದೇವತೆಗಳಲ್ಲಿ ಭಕ್ತಿ ಇರುವುದು. ರವಿ ೫ರಲ್ಲಿದ್ದರೆ ಸೂರ್ಯ ನಲ್ಲಿಯೂ ಶಂಕರನಲ್ಲಿಯೂ ಭಕ್ತಿಯಿರುವುದು. ಚಂದ್ರನಿದ್ದರೆ ಯಕ್ಷಿಣಿ ಮೊದಲಾದ ದೇವತೆಗಳಲ್ಲಿ ನಂಬಿಕೆಯುಂಟು. ಶುಭರು ನೋಡಿದರೆ ಸ್ಕಂದ ಭೈರವಾದಿಗಳಲ್ಲಿ ನಂಬಿಕೆಯುಂಟು. ಬುಧನಿದ್ದರೆ ಚಾಮುಂಡಾದೇವಿಯಲ್ಲಿ, ಶನಿಯಿದ್ದರೆ ಪಿಶಾಚಿಕಾದಿ ಗ್ರಹಗಳಲ್ಲಿ, ರಾಹುಕೇತುಗಳಿದ್ದರೆ ಪರಪೀಡನೇ ಮಾಡುತ್ತಾ ಕ್ಷುದ್ರ ದೇವತೆಗಳಲ್ಲಿ ನಂಬಿಕೆಯುಳ್ಳವನಾಗುವನು.

ಈ ಹನ್ನೆರಡು ಭಾಗಗಳನ್ನು ಬಹಳ ಸೂಕ್ಷ್ಮವಾಗಿ ತಿಳಿಸಿ ಇದೆ. ಗ್ರಹಗಳ ಯೋಗ್ಯತೆ ಬಲಾಬಲಗಳನ್ನು ಚೆನ್ನಾಗಿ ಶೋಧಿಸಿ ಫಲ ನಿರ್ದೇಶ ಮಾಡಿದರೆ ಫಲಗಳು ಅನುಭವಕ್ಕೆ ಬಂದೀತು. ಬಲಾಬಲಗಳನ್ನರಿಯದೆ ಫಲ ನಿರ್ದೇಶ ಮಾಡುವುದರಿಂದ ಅನುಭವಕ್ಕೆ ಬರಲಾರದು.

---

# ಗ್ರಹಾವಸ್ಥೆಗಳು

೧. ಉಚ್ಚಗ್ರಹಕ್ಕೆ ದೀಪ್ತಾವಸ್ಥೆಯೆಂದು ಹೆಸರು. ಈ ಅವಸ್ಥೆಯಲ್ಲಿರುವ ಗ್ರಹವು ದೀರ್ಘಾಯಸ್ಸು, ರಾಜಯೋಗ, ಅನುಕೂಲವಾದ ಸಂಸಾರ, ವೃದ್ಧಿಗೆ ಬರುವ ಮಕ್ಕಳು, ಹಣ ಕೀರ್ತಿಗಳನ್ನು ಕೊಡುವದು.

೨. ಸ್ವಂತ ಮನೆಯಲ್ಲಿರುವ ಗ್ರಹಕ್ಕೆ ಸ್ವಸ್ಥಾನಾವಸ್ಥೆಯೆಂದು ಹೆಸರು. ವಿದ್ಯಾ, ದ್ರವ್ಯ, ಕೀರ್ತಿ, ಭೂಮಿ, ಸಂತಾನ ಸುಖ, ರಾಜಯೋಗ ಇವನ್ನು ಕೊಡುವದು.

೩. ಮಿತ್ರನ ಮನೆಯಲ್ಲಿರುವ ಗ್ರಹಕ್ಕೆ ಮುದಿತಾವಸ್ಥಾ ಎಂದು ಹೆಸರು. ಈ ಗ್ರಹವು ಸಮಸ್ತ ಸಂಗೀತ, ಸಾಹಿತ್ಯ, ನಾಟಕಾಲಂಕಾರದಲ್ಲಿ ರುಚಿ, ಸುಗಂಧ, ಪುಷ್ಪ ಮತ್ತು ಸ್ತ್ರೀಯರಲ್ಲಿ ಆಶೆ, ಸುಖ, ರಾಜಯೋಗವನ್ನು ಕೊಡುವದು.

೪. ಶುಭವರ್ಗದಲ್ಲಿರುವ ಗ್ರಹಕ್ಕೆ ಶಾಂತಾವಸ್ಥೆಯೆಂದು ಹೆಸರು. ಈ ಗ್ರಹವು ಧೈರ್ಯ, ಸಾಹಸ, ಸಹಾಯ ಮಾಡುವ ಬಂಧುಗಳು, ಸುಖಜೀವನ, ಹಣ, ಕೀರ್ತಿಗಳನ್ನೂ ಕೊಡುವದು.

೫. ವಕ್ರವಾಗಿರುವ ಗ್ರಹಕ್ಕೆ ಶಕ್ತಾವಸ್ಥೆಯೆಂದು ಹೆಸರು. ಈ ಗ್ರಹವು ಧೈರ್ಯ, ಸುಖ ರಾಜಯೋಗ ಮೊದಲಾದ ಶುಭಗಳನ್ನು ಕೊಡುವದು.

೬. ರಾಶ್ಯಂತ ಭಾಗದಲ್ಲಿರುವ ಗ್ರಹಕ್ಕೆ ಪೀಡಾವಸ್ಥಾ ಎಂದು ಹೆಸರು. ಈ ಗ್ರಹವು ಬಂಧುಮಿತ್ರದ್ವೇಷ, ಸಂಸಾರದಲ್ಲಿ ಅಣ್ಣತಮ್ಮಂದಿರಲ್ಲಿ ಜಗಳ, ಚೋರಬುದ್ಧಿ, ರಾಜಪೀಡೆ, ದೇಶಭ್ರಷ್ಟತ್ವಗಳನ್ನು ಕೊಡುವದು.

೭. ಶತ್ರುಕ್ಷೇತ್ರದಲ್ಲಿರುವ ಗ್ರಹಕ್ಕೆ ದೀನಾವಸ್ಥಾ ಎಂದು ಹೆಸರು. ಈ ಗ್ರಹದಿಂದ ಜಾತಿಭ್ರಷ್ಟತ್ವ, ರೋಗ, ದೀನತ್ವ, ಸ್ವಜನವಿರೋಧ, ನೀಚ ಸ್ವಭಾವ, ಮನೋವೈಕಲ್ಯ, ರಾಜದಂಡನೆಗಳೂ ಉಂಟಾಗುವದು

೮. ಸೂರ್ಯನ ಜೊತೆಯಲ್ಲಿರುವ ಗ್ರಹಕ್ಕೆ ವಿಕಲಾವಸ್ಥೆ ಎಂದು ಹೆಸರು ಚಿತ್ತಭ್ರಮಣೆ, ಮಾತಾಪಿತೃನಾಶ, ಅಧಿಕ ಶತ್ರು ಬಾಧೆ, ಪರದೇಶ ವಾಸ, ಪುತ್ರ ಮಿತ್ರ ನಾಶ, ಅಪಕೀರ್ತಿಗಳು ಉಂಟಾಗುವವು.

೯. ನೀಚನಾದ ಗ್ರಹಕ್ಕೆ ಬಲಾವಸ್ಥೆ ಎಂದು ಹೆಸರು, ಗ್ರಹವು ಈ ಸದಾ ನಷ್ಟ, ದಾರಿದ್ರ್ಯ, ಗುರುಹಿರಿಯರಲ್ಲಿ ದ್ವೇಷ, ಬಂಧನ, ರೋಗ, ಸಂಕಟ, ಅಪಮಾನ, ನಿಂದೆಗಳನ್ನು ಕೊಡುವದು.

೧೦. ಅತಿಚಾರಬಂಧ ಗ್ರಹಕ್ಕೆ ಭೀತಾವಸ್ಥಾ ಎಂದು ಹೆಸರು. ಈ ಗ್ರಹವು ಕಳ್ಳರು, ಅಗ್ನಿ, ಶತ್ರುಗಳಿಂದ ನಷ್ಟ, ರಾಜರು, ಅಧಿಕಾರಸ್ಥರು ಇವರಿಂದ ದಂಡನ, ಧನನಾಶಗಳು, ಪರದೇಶವಾಸ, ಸ್ವದೇಶದಲ್ಲಿ ಅಪಮಾನ, ದುರ್ಮಾರ್ಗದಲ್ಲಿ ಜೀವನ, ಪರದೇಶದಲ್ಲಿಯೂ ಹಿಂಸೆ, ಅಪಾಯಗಳನ್ನು ಉಂಟುಮಾಡುವವು.

------

# ಗ್ರಹಸಮಯಗಳು

## ಇದನ್ನು ಕಂಡುಹಿಡಿಯುವ ವಿಧ.

ಯಾವ ಗ್ರಹಕ್ಕೆ ಸಮಯ ಕಂಡು ಹಿಡಿಯಬೇಕಾದರೂ ಮೇಷದಿಂದ ಲಗ್ನಕ್ಕೆ ...ಸಿ ಆ ಸಂಖ್ಯೆಯನ್ನು ಲಗ್ನದಿಂದ ಆ ಗ್ರಹವಿರುವ ಮನೆಗೆ ಆಗುವ ಸಂಖ್ಯೆಗೆ ಸೇರಿಸಿ ಮೊತ್ತವನ್ನು ಎರಡರಿಂದ ಗುಣಿಸಿ, ನಂತರ ಬಂದ ಲಬ್ಧವನ್ನು ಆ ಗ್ರಹದ ದಶಾ ವತ್ಸರ ಸಂಖ್ಯೆಯಿಂದ ಗುಣಿಸಿ, ಇಪ್ಪತ್ತೇಳರಿಂದ ಭಾಗಿಸಿದರೆ ಶೇಷ ನಿಲ್ಲುವ ...ಖ್ಯೆಗೆ ಯಾವ ಸಮಯವೋ ಅದನ್ನು ಇದರ ಕೆಳಗೆ ವಿವರಿಸಿ ಇರುವಂತೆ ತಿಳಿದು ...ಳ್ಳಬೇಕು.

### ಉದಾಹರಣೆ

| | | | |
|---|---|---|---|
| ಕೇ | ಕು | ಲಗ್ನ ರವಿ-ಬು | ಶುಕ್ರ |
| | ರಾಶಿಚಕ್ರ | | |
| ಗುರು | | | |
| ಚಂ | | ಶನಿ | ರಾ |

| | | | |
|---|---|---|---|
| | ಕು-ಬು ಗುರು | ಚಂದ್ರ ರಾಹು | ರವಿ ಲಗ್ನ |
| | ಅಂಶಚಕ್ರ | | |
| ಶನಿ ಶುಕ್ರ | | | |
| | ಕೇತು | | |

ಈ ರಾಶಿ ಚಕ್ರದಿಂದ ಶನಿಯ ಸಮಯವನ್ನು ನೋಡಬೇಕು.



# ಲಗ್ನ ವೃಷಭ

ಮೇಷದಿಂದ ಲಗ್ನಕ್ಕೆ ೨
ಲಗ್ನದಿಂದ ಶನಿ ಇರುವ ರಾಶಿಗೆ ೬

೮x೨

೧೬x೧೯ ಶನಿ ದಶಾಸಂವತ್ಸ

೨೭)೩೦೪(೧೧
೨೭

೩೪
೨೭

೭ ಕ್ಕೆ ಯಗ್ನಯತ್ನ ಸಮಯ

ಈ ಮೇರೆಗೆ ತಿಳಿಯಬೇಕು

೧. ಸ್ನಾನ ಸಮಯದಲ್ಲಿ ಇರುವ ಗ್ರಹದ ಫಲ--ಸುಪುತ್ರ, ಕಳತ್ರ ಸುಖ ಸ್ವಜನ ಗೌರವ, ಜಯಪ್ರದ.

೨. ವಸ್ತ್ರಧಾರಣ ಸಮಯದಲ್ಲಿರುವ ಗ್ರಹದ ಫಲ--ರಾಜಪೂಜ್ಯತೆ, ರ ವಸ್ತ್ರ, ಧನಲಾಭ, ಸುಗಂಧಮಾಲ್ಯಾಭರಣ ಶಕ್ತಿ.

೩. ಗಂಧಾಲಂಕಾರ ಸಮಯ--ರಾಜಗೌರವ, ಸುಖ ಸಂತೋಷ, ಕಾರ್ಯಶಕ್ತಿ

೪. ಪೂಜಾಯತ್ನ ಸಮಯ--ಭೂಮೂಲಕ ಧನಲಾಭ, ವಾಹನಾಂದೋ ಳಿಕಾ ಲಾಭ, ಸುಖಜೀವನ, ಬಂಧು ಪೂಜ್ಯತೆ.

೫. ಪಂಚಾಕ್ಷರೀ--ಭೂ ಧನಲಾಭ, ರಾಜದ್ವಾರ ತೊಂದರೆ, ದ್ರವ್ಯನಷ್ಟ ಅಪವಾದ.

೬. ಪೂಜೆ-ದುಷ್ಟ ಪ್ರಭುಜನರಲ್ಲಿ ಕೂಡ ಸ್ನೇಹ-ಅದರಿಂದ ಧನಲಾಭ-ಜನರ ಅನುರಾಗ-ಧನಲಾಭ ಉಂಟು.

೭. ಯಜ್ಞ-ಯತ್ನ-ಹೃದ್ರೋಗ-ವಿದ್ಯಾಪ್ರಸಂಗ- ಪಾಂಡಿತ್ಯ – ಪಿತ್ತಬಾಧೆ

೮. ವಿಷ್ಣುಪೂಜೆ-ಅನುಕೂಲ-ಬಂಧುಗಳು ಮತ್ತು ಭೂಮೂಲಕ ದ್ರವ ಲಾಭ-ಶತ್ರುಜಯ.

೯. ನಮಸ್ಕಾರ-ಸವಿಮಾತು-ಸುವಾಹನ-ಕಪಟ.

೧೦. ಪ್ರದಕ್ಷಿಣಾ- ಗುಲ್ಮರೋಗ - ಅತಿಸಾರಜ್ವರ - ರಾಜಪೀಡೆ - ದುಗಾ ಪೂಜೆ.

೧೧. ರುದ್ರಪೂಜೆ- ಗ್ರಾಮಪುರಾಧಿಪತ್ಯ – ಕಳತ್ರ-ಪುತ್ರ-ಧನವೃದ್ಧಿ–ಸುಖ.

೧೨. ಅತಿಥಿಪೂಜೆ-ಡಂಭ–ರಾಜಸ–ನಿಧಿಪ್ರಾಪ್ತಿ–ಮಂತ್ರವಾದಿ.

೧೩. ಭೋಜನ–ಜಾತ್ಯಂತರ ಕರ್ಮಹೀನತ್ವ–ಪರಹಿಂಸೆ–ಪರದ್ವೇಷಿ ರಾರೋಗಿ–ಸುಖವಿಲ್ಲ.

೧೪. ಉದಕಪಾನ-ಕುತ್ಸಿತಾನ್ನ ಭೋಜನ-ಬಂಧುಮಿತ್ರರಲ್ಲಿ ದ್ವೇಷ.

೧೫. ಕೋಪ-ದರಿದ್ರ–ಹಿಂಸಕ-ಸಂಕಟಪಡುವವನು.

೧೬. ತಾಂಬೂಲ-ವಸ್ತ್ರ-ವಾಹನ-ಧನ-ಗುಣಲಾಭ–ರಾಜಾಧಿರಾಜರಲ್ಲಿ ಚಯು-ವಾಕ್ಚಮತ್ಕಾರ–ಕಾರ್ಯದಕ್ಷ.

೧೭. ದೇವಸಭೆ – ಸುಮನಸ್ಸು – ನಿಧಾನಿ-ಮಂತ್ರಸಿದ್ಧ – ಪರೋಪಕಾರಿ ೋಗ್ಯ.

೧೮. ಕಿರೀಟಧಾರಣ-ಸೇನಾನಾಯಕ-ಧನಲಾಭ-ವಿದ್ಯಾವಂತ-ಯಶೋವಂತ

೧೯. ರಹಸ್ಯ–ಒಳ್ಳೇಮಾತು–ಗುಟ್ಟುಗಾರ-ಸೋಮಾರಿ.

೨೦. ಆಲಸ್ಯ–ಸೋಮಾರಿ–ಹೆಡ್ಡ-ಶಾಸ್ತ್ರಜ್ಞ.

೨೧. ನಿದ್ರೆ-ಪರಕಾರ್ಯಧುರಂಧರ-ಕಾಮಕ್ರೋಧಪರ – ತಾಯಿ – ಹೆಂಡತಿ– ೊದಲಾದವರನ್ನು ಹಿಂಸೆ ಮಾಡುವನು.

೨೨. ಜಲಪಾನ–ಸ್ವಜನ–ಗುರುಹಿರಿಯರಲ್ಲಿ ದ್ವೇಷ–ರೋಗಿಷ್ಠ.

೨೩. ಅಮೃತಪಾನ-ಆರೋಗ್ಯ-ಸುಕಳತ್ರ-ಪುತ್ರ, ಭೋಜನಲಾಭ ಜಪೂಜ್ಯತೆ.

೨೪. ಧನಾರ್ಜನ-ಮಾನಿ-ಸಂಪನ್ನ–ಕಾರ್ಯದಲ್ಲಿ ಜಯವುಳ್ಳವನು- ನಾನಾವಿಧ ಲಾಭ.

೨೫. ಕಿರೀಟವಿಸರ್ಜನೆ-ಅಧಿಕಾರನಷ್ಟ- ಸುಖಹೀನ-ಜನತಿರಸ್ಕಾರ- ರವವಿಲ್ಲ.

೨೬. ಅತಿನಿದ್ರೆ-ಮದೋನ್ಮತ್ತ–ವಾತಪಿತ್ತಗಳಿಂದ ಕೃಶನಾದವನು, ಾಜವಿರೋಧಿ.

೨೭. ಸ್ತ್ರೀಸಂಭೋಗ-ಕಾಮಕ್ರೋಧಪರನು-ಪರಾಪವಾದಿ-ದುಃಖಿ.

—0—

# ದ್ವಾದಶಲಗ್ನಗಳಿಗೂ ಗ್ರಹಗಳ ಫಲ ಸಂಕ್ಷೇಪ ವಿವರ

## ಲಗ್ನಾದಿ ರವಿಫಲ

೧ ನೇ ಸ್ಥಾನದಲ್ಲಿ ರವಿ ಇದ್ದರೆ ಬುದ್ಧಿವಂತ, ಧೈರ್ಯವಂತ, ಉ... ಶರೀರಿ, ಸೋಮಾರಿ, ಸದಾಚಾರಸಂಪನ್ನ, ಚಂಚಲಚಿತ್ತ, ಉದಾರಿ, ಲಜ್ಜಾಹೀ...

೨ ರಲ್ಲಿ ಮುಖರೋಗಿ, ರಾಜದಂಡನೆಗಳಿಂದ ದ್ರವ್ಯ ನಷ್ಟ, ಕೋಪಿಷ್ಠ.

೩ ರಲ್ಲಿ ಬುದ್ಧಿವಂತ, ಸಾಹಸಿ, ಧನಧಾನ್ಯಸಂಪತ್ತು, ಅನುಜರಿಲ್ಲ, ಶೂರ.

೪ ರಲ್ಲಿ ಅಂಗಹೀನ, ಅಕಾರಣವಾಗಿ ಜನವಿರೋಧಿ, ಮಾತೃಗಂಡ, ಜಾ... ವಿರೋಧಿ.

೫ ರಲ್ಲಿ ದರಿದ್ರನು, ಅಲ್ಪಪುತ್ರ, ದೇವತಾನುಗ್ರಹದಿಂದ ಪುತ್ರೋತ್ಪತ್ತಿ... ಹೃದ್ರೋಗಿ, ಪಿತ್ರಾರಿಷ್ಟ, ಎದೇರೋಗ.

೬ ರಲ್ಲಿ ಜ್ಞಾತಿಅಲ್ಪ, ಶತ್ರುನಾಶಕ, ಮೊಮ್ಮಕ್ಕಳುಂಟು, ವ್ಯಭಿಚಾರಿ, ಸುಗುಣವಂತ.

೭ ರಲ್ಲಿ ವಯಸ್ಸಾದ ನಂತರ ವಿವಾಹ. ಸ್ತ್ರೀಯರಿಂದ ತಿರಸ್ಕರಿಸಲ್ಪಡುವನು... ದೇಶಾಂತರ ಸಂಚಾರಿ, ಹೆಂಡತಿಯ ಮಾತು ಕೇಳುವವನು.

೮ ರಲ್ಲಿ ಅಲ್ಪ ಸಂತಾನ, ಚಿರಂಜೀವಿ, ಕಣ್ಣುರೋಗ, ದುರ್ಬಲಶರೀರ, ಜಿಪುಣ...

೯ ರಲ್ಲಿ ದೇವತಾಭಕ್ತಿ, ಧರ್ಮಿಷ್ಠ, ತಪಸ್ವಿ, ಅಲ್ಪಭಾಗ್ಯ, ಸ್ವಯಾರ್ಜಿತಧನ... ಕಲಹಿ, ಗ್ರಂಥಿರೋಗ.

೧೦ ರಲ್ಲಿ ಪ್ರಖ್ಯಾತಿ, ಧನಾರ್ಜನೆಯಲ್ಲಿ ಸಮರ್ಥ, ಆರೋಗ್ಯ, ವಿದ್ಯಾವಂತ... ಸಂಗೀತದಲ್ಲಿ ಅಪೇಕ್ಷೆ, ಗ್ರಾಮಪುರಾಧಿಕಾರಿ.

೧೧ ರಲ್ಲಿ ಪಶು, ಭೂಮಿ, ಧನ ವೃದ್ಧಿ, ಯಶೋವಂತ, ಆರೋಗ್ಯ, ಅನೇ... ಶತ್ರುಗಳು.

೧೨ ರಲ್ಲಿ ದರಿದ್ರ, ಕಳ್ಳ, ವಿಧವಾಸಂಗಮಿ, ದುರಾಚಾರಿ, ಉದ್ದವಾ... ಶರೀರ.

---

## ಲಗ್ನಾದಿ ಚಂದ್ರ ಫಲ

೧ ರಲ್ಲಿ, ಲಗ್ನದಲ್ಲಿ ಚಂದ್ರನಿದ್ದರೆ ಪುಷ್ಟವಾದ ಶರೀರ, ಸುಂದರ, ಕೊಂ... ಅನಾರೋಗ್ಯ, ಗುಹ್ಯಸ್ಥಳದಲ್ಲಿ ಕಿವಿಯಲ್ಲಿ ರೋಗವುಳ್ಳವನು, ವಿದ್ಯಾವಂ... ಭ್ರಾತೃವಂತ.

೨ ರಲ್ಲಿ ಸುಂದರಮುಖ, ಸುನೇತ್ರ, ಧನವಂತ, ರಾಜಪೂಜ್ಯತೆ.

೩ ರಲ್ಲಿ ಅಜೀರ್ಣರೋಗ, ಮೂಲವ್ಯಾಧಿ, ಇತರರಿಂದ ಪೋಷಿಸಲ್ಪಟ್ಟ ಶಿಶು ಸಹೋದರಿಯರು, ಕೃಶಶರೀರ, ಭಕ್ತಿಹೀನ, ಕ್ರೂರಸ್ವಭಾವ.

೪ ರಲ್ಲಿ ರಸಿಕ, ಮರ್ಯಾದಸ್ತ, ಸುಖಿ, ವ್ಯಭಿಚಾರಿ, ಬಹುಜನಪೋಷಕ, ಕೋಲವಾದ ಮಾತ್ರ.

೫ ರಲ್ಲಿ ಬಹುಮಾನ, ಪಶು ವೃದ್ಧಿ, ಸುಂದರವಾದ ಹೆಂಡತಿ, ಹೆಣ್ಣು ಮಕ್ಕಳ ಖಂಡವಿದ್ಯಾ, ಡಂಭಾಚಾರಿ.

೬ ರಲ್ಲಿ ಸೋಮಾರಿ, ಸ್ತ್ರೀವಶವರ್ತಿ, ನಾಜೋಕಾದ ಶರೀರ, ದರಿದ್ರ, ವಿಧವಾ ...ಾ, ಮಾತೃಕ್ಷೀರವಿಲ್ಲ.

೭ ರಲ್ಲಿ ಸ್ತ್ರೀಲೋಲ, ದುರ್ಮಾರ್ಗ, ಒಳ್ಳೇ ಹೆಂಡತಿ, ಬಹುಕಾಮಿ, ದುಃಖ ಅಸೂಯಾಪರ. ಪಾಪಗ್ರಹವೀಕ್ಷಣೆ ಇದ್ದರೆ ದ್ವಿಕಳತ್ರ, ಶುಭ ಗ್ರಹವೀಕ್ಷಣೆ ... ಏಕಕಳತ್ರ.

೮ ರಲ್ಲಿ ಅಲ್ಪಸಂತಾನ, ಪಿತ್ತಶರೀರ, ಮಾತೃದ್ವೇಷ, ಮಾತೃಗಂಡವು, ಕೆಟ್ಟ ...

೯ ರಲ್ಲಿ ಪಾಪಭೀತ, ಸುಪುತ್ರವಂತ, ಧನವಂತ, ಕಥಾಶ್ರವಣಾಪೇಕ್ಷಿ

೧೦ ರಲ್ಲಿ ಕಾರ್ಯಾಧ್ಯಕ್ಷ, ದೀರ್ಘಾಯುಃ, ಧರ್ಮಿಷ್ಠ, ಯುಕ್ತಿವಂತ, ಗುರು ...ರಲ್ಲಿ ಭಕ್ತಿ.

೧೧ ರಲ್ಲಿ ಪರೋಪಕಾರಿ, ಪುತ್ರವಂತ, ಸಂಪನ್ನ, ಕೀರ್ತಿವಂತ, ನ್ಯಾಯವಾದಿ, ...ರಿ.

೧೨ ರಲ್ಲಿ ಅಲ್ಪಮನಸ್ಸು, ಸಧಾ ದುಃಖವಾರ್ತೆಯನ್ನು ಕೇಳುವನು, ಅಂಗಹೀನ, ...ಯಾಪರ, ಕ್ರೂರಸ್ವಭಾವ.

---

## ಲಗ್ನಾದಿ ಕುಜ ಫಲ

... ರಲ್ಲಿ ಲಗ್ನವಲ್ಲಿ ಕುಜನಿದ್ದರೆ ವ್ರಣಶರೀರಿ, ದೃಢಕಾಯುಸು, ಚೋರಬುದ್ಧಿಯು, ...ಕಾಂತಿಯು, ಪಿತೃಗಂಡ.

೨ ರಲ್ಲಿ ಮುಂಗೋಪಿ, ಬಹು ಧಾರಾಳಿ, ದುರ್ವ್ಯಯ, ವಿದ್ಯಾವಿಘ್ನ, ...ಗ್ಯ.

೩ ರಲ್ಲಿ ಅನುಜರಿಲ್ಲ, ದರಿದ್ರ, ವೇಶ್ಯಾಸ್ತ್ರೀಲೋಲ, ನಿಷ್ಠೂರ.

೪ ರಲ್ಲಿ ಮಾತಾಪಿತೃಗಂಡ, ತಾಯಿ ರೋಗಿಷ್ಠ, ಮನೆಯಲ್ಲಿ ವ್ಯಾಜ್ಯಗಳು, ...ಯನಾಗಿರುವನು, ಸ್ತ್ರೀಹತ್ಯಮಾಡುವನು.

೫ ರಲ್ಲಿ ಪುತ್ರರಿಲ್ಲ, ಬಹುಜನವಿರೋಧಿ, ಸರ್ಕಾರದಲ್ಲಿ ವಿರೋಧ, ರಾಜಕೋ

೬ ರಲ್ಲಿ ಹಣವಂತ, ಭೂಮಿಯುಳ್ಳವನು, ಶತ್ರುಜಯ, ರಾಜಕಾರ್ಯ ಕೂಲ ಬುದ್ಧಿವಂತ.

೭ ರಲ್ಲಿ ರಕ್ತಕಾಸಿರೋಗ, ಅಥವಾ ಮೂಲವ್ಯಾದಿಯುಳ್ಳ ಹೆಂಡತಿ, ಕೈಗ ರೋಗ, ಅನೇಕ ಜನ ಭ್ರಾತೃ, ಸೋದರಮಾವಂದಿರುಳ್ಳವನು, ಪಾಪವೀಕ್ಷಣೆಯಿ ದ್ವಿಕಳತ್ರ.

೮ ರಲ್ಲಿ ಅಲ್ಪಸಂತಾನ, ಅಲ್ಪಾಯುಸ್ಸು, ತಂದೆ ತಾತ ಸೋದರಮಾವಂದ ಗಂಡ, ಸೂಳೆಗಾರ, ಹೆಂಡತಿ ಅಪರ ವಯಸ್ಸಿನಲ್ಲಿ ಸಾಯುವಳು:

೯ ರಲ್ಲಿ ಕೃಷಿ ಮೂಲಕ ನಷ್ಟ, ತಂದೆಗೆ ರೋಗ, ಕ್ರೂರಸ್ವಭಾವ.

೧೦ ರಲ್ಲಿ ಸ್ವಯಾರ್ಜಿತ ದ್ರವ್ಯ, ಕೃಷಿಯಿಂದ ಲಾಭ, ದೃಢಗಾತ್ರ.

೧೧ ರಲ್ಲಿ ಕಾರ್ಯಾಧ್ಯಕ್ಷ, ಅಣ್ಣಂದಿರುಂಟು, ಅನೇಕ ಭೂಮಿ ಮತ್ತು ಸ್ನೇ ರುಳ್ಳವನು.

೧೨ ರಲ್ಲಿ ರೋಗಶರೀರಿ, ದರಿದ್ರ, ಮೋಸಗಾರ, ಜನದ್ವೇಷಿ, ಕಳತ್ರನ ಕೇತುವಿನೊಡನೆ ಇದ್ದರೆ ಮನೆಗಳಿಗೆ ಬೆಂಕಿ ಹಚ್ಚುವವನು.

--0--

## ಲಗ್ನಾದಿ ಬುಧ ಫಲ

೧ ರಲ್ಲಿ ಲಗ್ನದಲ್ಲಿ ಬುಧನಿದ್ದರೆ ವಿದ್ಯಾವಂತ, ತಿಳುವಳಿಕೆಯುಳ್ಳವ ಜ್ಯೋತಿಷ ಮಂತ್ರ ಶಾಸ್ತ್ರಗಳಲ್ಲಿ ಆಸಕ್ತಿ, ಮಂತ್ರವಾದಿ, ಪಿಶಾಚಿ ಬಿಡಿಸುವ ಚಿರಕಾಲಜೀವಿ, ಗೌರವವಂತ.

೨ ರಲ್ಲಿ ಬಹುಪುತ್ರವಂತ, ಮಾತಾಭಿಮಾನಿ, ಹಣವಂತ, ಧಾನ್ಯಸಂಗ್ರಹಿ.

೩ ರಲ್ಲಿ ಸುಖಿ, ಕ್ರೂರಿ, ಸ್ತ್ರೀಸುಖಿ, ಸಂಪತ್ತು, ಬಹುಭ್ರಾತೃ.

೪ ರಲ್ಲಿ ಪಂಡಿತ, ದಾಕ್ಷಿಣ್ಯಪರ, ಪರೋಪಕಾರಿ.

೫ ರಲ್ಲಿ ಸೋದರಮಾವಂದಿರಿಗೆ ಗಂಡ, ತಾಯಿ ತಂದೆಗಳಿಗೆ ರೋಗ, ದ್ವಾರ ಪೂಜ್ಯತೆ, ಕಲಹಿ, ಡಂಭಗಾರ, ನಾನಾವಸ್ತ್ರ ಸಂಗ್ರಹಗಳಲ್ಲಿ ಕುತೂ ವುಳ್ಳವನು.

೬ ರಲ್ಲಿ ವಿದ್ಯಾವಿಘ್ನ, ಶತ್ರುಜಯ, ಗೌರವಸ್ಥ, ಯುಕ್ತಿಶಾಲಿ, ದ್ರವ್ಯ

೭ ರಲ್ಲಿ ಧರ್ಮಿಷ್ಠ, ವ್ಯಭಿಚಾರಿ. ಆರೋಗ್ಯ.

೮ ರಲ್ಲಿ ದಾಕ್ಷಿಣ್ಯಪರ, ಅಲ್ಪಸಂತಾನಿ, ಬಹುಭೂಮಿ.

೯ ರಲ್ಲಿ ದಾಕ್ಷಿಣ್ಯಪರ, ಸಂಗೀತವಾದ್ಯದಲ್ಲಿ ಪ್ರೀತಿ, ವ್ಯಭಿಚಾರಿ, ಪುತ್ರವಂತ, ವೇಷಧಾರಿ.

೧೦ ರಲ್ಲಿ ಅದೃಷ್ಟವಂತ, ಸುಖಿ, ವೃದ್ಧಾಪ್ಯದಲ್ಲಿ ಸರ್ವಸಂಗಪರಿತ್ಯಾಗ ಮಾಡಿ ನಮಾರ್ಗದಲ್ಲಿರುವನು.

೧೧ ರಲ್ಲಿ ಬಹುಭೂಮಿ, ದ್ರವ್ಯಸುಖಗಳುಳ್ಳವನು.

೧೨ ರಲ್ಲಿ ಬುದ್ಧಿಶಾಲಿ, ಚಪಲಚಿತ್ತ, ದಾಕ್ಷಿಣ್ಯಪರ, ಪರಗೃಹವಾಸಿ.

---

## ಲಗ್ನಾದಿ ಗುರುಫಲ

೧ ರಲ್ಲಿ ಲಗ್ನದಲ್ಲಿ ಗುರುವಿದ್ದರೆ ಪಂಡಿತ, ತರ್ಕಶಾಸ್ತ್ರಜ್ಞ, ಅಧಿಕ ಮರ್‍ಯಾದೆ, ಕಾಲ ಜೀವಿ.

೨ ರಲ್ಲಿ ಸುಂದರವಾದ ಶರೀರ, ಕುಟುಂಬಿ, ಜನರಲ್ಲಿ ಮರ್‍ಯಾದೆ.

೩ ರಲ್ಲಿ ಜಿಪುಣ, ಬಹುಭ್ರಾತೃ ದಾಕ್ಷಿಣ್ಯಪರನಾಗಿ ಮಾತನಾಡುವನು, ತನ್ನ ರ್ಯವನ್ನು ಯಾವ ವಿಧದಿಂದಲಾದರೂ ಸಾಧಿಸಿಕೊಳ್ಳುವನು ಸಮೀಪ ಬಂಧು ಪಕ, ಕೃಷಿಯಲ್ಲಿ ಆಶೆ.

೪ ರಲ್ಲಿ ಹಣವಂತ, ಸುಖಿ, ವಿದ್ಯಾವಂತ.

೫ ರಲ್ಲಿ ಅತಿಬುದ್ಧಿ, ಸೇನಾಪತಿ, ವಿಶಾಲವಾದ ನೇತ್ರ, ಪುತ್ರರಿಂದ ಖ್ಯಾತಿ.

೬ ರಲ್ಲಿ ಜ್ಞಾತಿಬಾಹುಳ್ಯ, ವ್ಯಭಿಚಾರಿ. ಅಜೀರ್ಣರೋಗಿ.

೭ ರಲ್ಲಿ ಪಿತೃವಿಗಿಂತ ಅಧಿಕನಾಗುವನು, ಹಣವಂತರಲ್ಲಿ ಮದುವೆ, ಬಹಳ ಪವುಳ್ಳವನು, ಹೆಸರು ಪಡೆಯಬೇಕೆಂಬ ಕುತೂಹಲವುಳ್ಳವನು, ಕೃಷಿಯಿಂದ ನ ಪಡೆಯುವನು.

೮ ರಲ್ಲಿ ಅಸೂಯಾಪರ, ಮಧ್ಯಪಾನಾಸಕ್ತ, ಹೆಂಡತಿ ಸಾಯುವಳು, ಉದರ ಶೆ, ಸೇವಕರಿಗೆ ಗುರು, ಪರೋಪಕಾರಕ್ಕಾಗಿ ಜನರಿಂದ ಹಣವನ್ನು ಜೊತೆಗೊಳಿಸಿ ು ಅಪಹರಿಸುವನು. ನಿಂದಾಸ್ಪದವಾದ ನಡತೆ ದೀರ್ಘಾಯುರ್ಯೋಗ.

೯ ರಲ್ಲಿ ಧರ್ಮಿಷ್ಠ. ದೇವತಾಭಕ್ತಿಯುಳ್ಳವನು, ಹಣವಂತ.

೧೦ ರಲ್ಲಿ ವಿದ್ಯಾವಂತ, ಧನಾರ್ಜನಾ ಸಮರ್ಥ, ಗ್ರಾಮಪಟ್ಟಣಾಧಿಕಾರಿ.

೨೧ ರಲ್ಲಿ ಸಂಗೀತದಲ್ಲಿ ಪ್ರವೀಣ, ಅಣ್ಣಂದಿರುಳ್ಳವನು, ಪರರಲ್ಲಿ ಅನುಸರಿಸಿ ಡುವನು.

೧೨ ರಲ್ಲಿ ಕ್ರೂರ, ದರಿದ್ರ, ಅಲ್ಪ ಸಂತಾನ, ನೀಚಸ್ತ್ರೀಯರಲ್ಲಿ ರಮಿಸುವನು, ತ್ಯದಲ್ಲಿ ಜ್ಞಾನಿ.

# ಲಗ್ನಾದಿ ಶುಕ್ರಫಲ

೧ ರಲ್ಲಿ ಲಗ್ನದಲ್ಲಿ ಶುಕ್ರನಿದ್ದರೆ ಗಣಿತಜ್ಞ, ಚಿರಂಜೀವಿ, ಕಳತ್ರ, ರತ್ನ, ಪುಷ್ಪ, ಸುಗಂಧ, ವಸ್ತ್ರ, ಸ್ತ್ರೀಗಳ ಮೇಲೆ ತುಂಬಾ ಆಶೆ, ರತಿಯಲ್ಲಿ ಕುಶಲತ್ವ, ಸುಂದ ಶರೀರ, ಶೈತ್ಯರೋಗ.

೨ ರಲ್ಲಿ ವಿಶಾಲಾಕ್ಷ, ಬಹುಕುಟುಂಬಿ, ಮೃಷ್ಟಾನ್ನ ಭೋಜನ ಸುಖಿ, ಅನುಕೂ ವಾದ ಭ್ರಾತೃ, ಸ್ತ್ರೀ ದ್ವೇಷಿ, ರಸಿಕತ್ವ, ದಾಕ್ಷಿಣ್ಯ ಸ್ವಭಾವ, ಮನೋಹರವಾ ನಡತೆ, ಗ್ರಂಥಕರ್ತ, ಕವಿ, ವಿದ್ಯಾವಂತ.

೩ ರಲ್ಲಿ ಅನುಕೂಲವಾದ ಭ್ರಾತೃಗಳು, ದಾಕ್ಷಿಣ್ಯವಂತ, ಕೃಪಣ, ಆರೋಗ್ಯ

೪ ರಲ್ಲಿ ವಿದ್ವಾಂಸ, ವಿಶ್ವಾಸವಾದ ತಾಯಿ, ಹಾಲಿನ ಮೇಲೆ ಪ್ರೀತಿ.

೫ರಲ್ಲಿ ಪ್ರಜ್ಞಾಶಾಲಿ, ಮಂತ್ರಿತ್ವ ಮಾಡುವ ಶಕ್ತಿ, ಹೆಣ್ಣು ಮಕ್ಕಳು, ತುಂಬ ಕುಟುಂಬಿ.

೬ ರಲ್ಲಿ ಶತ್ರುನಾಶ ಜ್ಞಾತಿವೃದ್ಧಿ, ಸ್ತ್ರೀಲೋಲ. ಮೇಹ ರೋಗ.

೭ ರಲ್ಲಿ ಸುರತಶಾಸ್ತ್ರಪ್ರವೀಣ, ಹಣವಂತ, ಶನಿಯೊಡನೆ ಇದ್ದರೆ ಹೆಂಡ ವ್ಯಭಿಚಾರಿ.

೮ ರಲ್ಲಿ ಮಾತೃಗಂಡ, ಸುಖಿ, ಅಲ್ಪಾಯುಸ್ಸು, ಅತಿಯಲ್ಲಿ ಇಚ್ಛಾನುಸಾ ನಡೆಯುವನು, ಅಂತ್ಯದಲ್ಲಿ ಸನ್ಮಾರ್ಗನು.

೯ ರಲ್ಲಿ ಆಚಾರವಂತ, ಸ್ವಮತಾಭಿಮಾನಿ.

೧೦ ರಲ್ಲಿ ವಿದ್ಯಾಭಂಗ, ದೈವಭಕ್ತಿ, ಅಣ್ಣಂದಿರು ಕಡಿಮೆ.

೧೧ ರಲ್ಲಿ ಪಂಡಿತ, ಹಣವಂತ ಕೃಷಿಲಾಭ.

೧೨ ರಲ್ಲಿ ಸ್ತ್ರೀಲೋಲ, ವ್ಯಭಿಚಾರಿ, ಜಿಪುಣ. ಹಣವಂತ, ಮಕ್ಕಳಿಲ್ಲ ಧಾರಾ ಕೆಲಸದಲ್ಲಿ ಸಂಕೋಚ.

............

# ಲಗ್ನಾದಿ ಶನಿಫಲ

೧ ರಲ್ಲಿ ಲಗ್ನದಲ್ಲಿ ಶನಿಯಿದ್ದರೆ ಪುತ್ರನಷ್ಟ, ದುಷ್ಟ ಸ್ವಭಾವ, ತಾರತಮ ವಿಲ್ಲದೆ ನಡೆಯುವನು, ಕೆಟ್ಟ ಮನುಷ್ಯ, ರಾಜಕೋಪದಿಂದ ತೊಂದರೆ.

೨ ರಲ್ಲಿ ದ್ರವ್ಯನಷ್ಟ, ದ್ವಿಕಳತ್ರ, ಸ್ವಲ್ಪಭೂಮಿ, ಬಿಕ್ಕಲುಮಾತು.

೩ ರಲ್ಲಿ ಭ್ರಾತೃನಷ್ಟ, ದಾಕ್ಷಿಣ್ಯ, ಪರೋಪಕಾರಿ, ಅನೇಕ ಸೇವಕರು

೪ ರಲ್ಲಿ ಮಲತಾಯಿ, ಸುಖಹೀನ ಕಪಟ.

೫ ರಲ್ಲಿ ಪುತ್ರಹೀನ, ದತ್ತುಪುತ್ರ. ಚಾಡಿಗಾರ, ಪಂಚಮ ಸ್ಥಾನವು ದ್ವಿಸ್ವಭಾವ
ದರೆ ದತ್ತ ಪುತ್ರ.

೬ ರಲ್ಲಿ ಅಲ್ಪ ಜ್ಞಾತಿ, ಕಿವುಡುತನ, ಅಲ್ಪ ಸಂತಾನ, ಕಲಹ.

೭ ರಲ್ಲಿ ರೋಗಿಷ್ಠ ಅನೇಕ ಕಳತ್ರ ವ್ಯಭಿಚಾರಿ, ಮೋಸಗಾರ.

೮ ರಲ್ಲಿ ದೀರ್ಘ ಶಿಶ್ನ. ಬೊಜ್ಜು ಬೆಳೆದಿರುವುದುಂಟು, ದರಿದ್ರ, ನೀಚಸ್ತ್ರೀ
ಸವಾಸ, ಕೆಟ್ಟ ನೋಟ, ಕುಷ್ಠರೋಗ, ಸಂಸಾರಿಗಳನ್ನು ಕೆಡಿಸುವನು.

೯ ರಲ್ಲಿ ಜಿಪುಣ, ಹರುಕುಬಟ್ಟೆಯುಳ್ಳವನು, ಕೆರೆ, ಛತ್ರ, ಗೋಪುರಗಳಗನ್ನು
ಟ್ಟವನು, ಪಿತೃವರ್ಗದ ಹೆಂಗಸರಿಗೆ ಗಂಡ.

೧೦ ರಲ್ಲಿ ಗಂಗಾದಿ ಸ್ನಾನ ಫಲ, ಪಿತ್ರಾಧಿಕ್ಯ, ಗ್ರಾಮಪುರಾಧಿಕಾರಿ, ಜಿಪ್ರಣ
ದೇಶತ್ಯಾಗಿ, ಅನೇಕ ಜನ ಸೇವಕರು.

೧೧ ರಲ್ಲಿ ಸ್ಥಿರಧ್ವನಿ, ದೀರ್ಘಾಯುಸ್ಸು, ಸ್ಥಿರಚಿತ್ತ, ಆರೋಗ್ಯ ವಿದ್ಯಾವಿಘ್ನ
ಿಷ್ಠ ಭ್ರಾತೃ ನಷ್ಟ, ಪುತ್ರರಿಲ್ಲದವನು, ಅಥವಾ ಹುಟ್ಟಿ ಸಾಯುವದ್ದರಿಂಗ ದುಃಖ
ಡುವನು.

೧೨ ರಲ್ಲಿ ನಾಚಿಕೆಯಿಲ್ಲ, ಸುಮಾರು ದೃಷ್ಟಿಯುಳ್ಳವನು, ವಿಕಲಾಂಗ.



## ಲಗ್ನಾದಿ ರಾಹುಫಲ

೧ ರಲ್ಲಿ ಲಗ್ನದಲ್ಲಿ ರಾಹುವಿದ್ದರೆ ಶತ್ರುಜಯ, ಮೃತಪ್ರಸೂತ, ಅತಿಕಾಮುಕ,
ೀಗಪೀಡೆ.

೨ ರಲ್ಲಿ ಜಿಪುಣ, ದ್ವಿಕಳತ್ರ, ಮುಂಗೋಪಿ, ಆರೋಗ್ಯ, ಸಂತಾನ ನಷ್ಟ,
ಭಾಗ್ಯ, ಮುಖರೋಗಿ, ಶ್ಯಾಮಲ ವರ್ಣ, ಪರಾಧೀನ.

೩ ರಲ್ಲಿ ಪರಾಕ್ರಮಶಾಲಿ, ಭಾಗ್ಯವಂತ, ಭ್ರಾತೃಸೌಖ್ಯ.

೪ ರಲ್ಲಿ ವಿದ್ಯಾವಿಘ್ನ ಪರಭಾಷಾಭಿಲಾಷಿ, ಭೂಷಣ ಸಮೃದ್ಧಿ. ಇಬ್ಬರು
ಡರು, ದ್ವಿಮಾತೃ, ವ್ಯಭಿಚಾರಿ.

೫ ರಲ್ಲಿ ಪುತ್ರವಿಘ್ನ. ವಮನ ವ್ಯಾಧಿ, ಗ್ರಾಮವಾಸ, ಹೆಂಡತಿಯಿಂದ ಹಿಂಸೆ,
ಸ್ವಭಾವ.

೬ ರಲ್ಲಿ ಸ್ತ್ರೀನಾಶ, ಹಣವಂತ, ಸೋದರಮಾವಂದಿರು ಚಿಕ್ಕಪ್ಪಂದಿರು ಇಲ್ಲ
ವನು.

೭ ರಲ್ಲಿ ಕುಡಿಯುವನು, ದ್ವಿಕಳತ್ರ ಪಥಮ ಕಳತ್ರಕ್ಕೆ ಕುಸುಮ ರೋಗ,
ತೀಯ ಕಳತ್ರಕ್ಕೆ ಅಜೀರ್ಣ, ಗುಲ್ಮವ್ಯಾಧಿ, ಸೌಖ್ಯಹೀನ, ವಿಧವೆಯರಲ್ಲಿ ಆಶೆ,
ೂತ್ರರೋಗಿ, ಅಪವಾದ.

೮ ರಲ್ಲಿ ಪತಿತ, ಕಲಹಿ, ಸ್ವಜನರಿಂದ ಬಿಡಲ್ಪಡುವನು, ರಾಜನಿಂದಲ ಪಂಡಿತರಿಂದಲೂ ಪೂಜಿತನು, ಧನನಷ್ಟ, ದುರಾಚಾರಿ, ಜನನಿಂದೆ,

೯ ರಲ್ಲಿ ಸ್ತ್ರೀವಶವರ್ತಿ, ಬಂಧುವರ್ಗವನ್ನು ಪಾಲಿಸುವನು, ಸಭೆಯಲ್ಲಿ ಪಂಡಿ ನಾಗಿ ಮಾತನಾಡುವುದಕ್ಕೆ ಶಕ್ತಿಯುಳ್ಳವನು, ದಯ ದಾಕ್ಷಿಣ್ಯವುಳ್ಳವನು, ಕೃತಜ್ಞನ ಶೂದ್ರ ಸಂಪ್ರದಾಯವುಳ್ಳವನು.

೧೦ ರಲ್ಲಿ ಧನವಂತ, ವಿತಂತು ಸಂಗಮಿ, ಕಾವ್ಯನಾಟಕಾಲಂಕಾರಾದಿ ವಿದ ವಂತ, ತುರುಷ್ಕರು ಮೊದಲಾದ ಜನರಲ್ಲಿ ಸಹವಾಸ, ಮಾನಿಷ್ಠಳಾದ ಕಾಮಿಯಾ ಹೆಂಗಸು ದೊರಕುವಳು, ಕ್ರೂರಕಾರಿ, ವಾತರೋಗಿ, ಸಂಚಾರಿ, ಸತ್ಕರ್ಮ ವಿಘ್ನ.

೧೧ ರಲ್ಲಿ ಧನಧಾನ್ಯವಂತ, ಆಯುಷ್ಮಂತ ಪುತ್ರರುಂಟು, ಇತರರ ಸ್ವತ್ತ ಅಪಹರಿಸುವನು.

೧೨ ರಲ್ಲಿ ದುರ್ಜನ ಸಂಗಮ. ದೈನ್ಯವೃತ್ತಿ, ಜಿಪುಣ, ಅಲ್ಪ ಸಂತಾನ, ವ್ಯಯ ಮಾಡುವನು ಕಾರ್ಯಗಳನ್ನು ಮಾಡಿ ಫಲವಿಲ್ಲದೆ ವ್ಯಸನ ಪಡುವನು.

---

## ಲಗ್ನಾದಿ ಕೇತುಫಲ

೧ ರಲ್ಲಿ ಲಗ್ನದಲ್ಲಿ ಕೇತುವಿದ್ದರೆ ಕೈಯಲ್ಲಿ ಕಷ್ಟವುಳ್ಳವನು, ಸೊಂಟನೋವ ಉಷ್ಣರೋಗಿ, ಬಲಹೀನ, ಹೆಂಡತಿಯ ಚಿಂತೆಯುಳ್ಳವನು.

೨ ರಲ್ಲಿ ಸಂಭ್ರಮ, ಮುಂಗೋಪಿ, ಕ್ರೂರಹೃದಯ, ಧನಧಾನ್ಯನಾಶ.

೩ ರಲ್ಲಿ ಲೋಕಪ್ರಿಯ, ಧನವಂತ, ತಮ್ಮಂದಿರಿಲ್ಲ, ಶಾರಿಕಾಪ್ರಿಯನು ಮನೋವ್ಯಾಕುಲನು.

೪ ರಲ್ಲಿ ಮಾತೃಸುಖವಿಲ್ಲ, ಕಲಹಪ್ರಿಯ, ವ್ಯಭಿಚಾರಿ, ಮನೊ ವ್ಯಥೆ.

೫ ರಲ್ಲಿ ಪರಾಕ್ರಮಶಾಲಿ, ಇತರರ ಸೇವೆ ಮಾಡುವನು, ವ್ಯಭಿಚಾರದಲ್ಲಿ ಆಸೆ, ಪಾಪಬುದ್ಧಿ, ಮೃದುಶಿರಸ್ಸು, ಮೊದಲ ಹೆಣ್ಣು ಸಂತಾನ, ಪುತ್ರನಷ್ಟ, ಇವನ ಅಣ್ಣ ತಮ್ಮಂದಿರು ಶಸ್ತ್ರ ವಾತರೋಗದಿಂದ ಪೀಡಿತರಾಗಿರುವರು, ಇವರಿಂದ ಇವನಿಗೆ ಮನಸ್ಸಂಕಟ.

೬ ರಲ್ಲಿ ಸಂಭ್ರಮವಚನ, ಸ್ತ್ರೀಪ್ರಿಯನು, ಸೋದರಮಾವಂದಿರಿಂದ ಅವ ಮಾನ ಹೊಂದುವನು, ಆರೋಗ್ಯ, ಅಲ್ಪಮನಸ್ಸು, ವ್ಯಭಿಚಾರಿ.

೭ ರಲ್ಲಿ ಕಾಮಾತುರ, ದಾಸೀ ಸಂಭೋಗ. ರೋಗಿಷ್ಠಳಾದ ಹೆಂಡತಿ, ಧನ ವ್ಯಯ, ವಿಧವಾಸಂಗಮ.

೮ ರಲ್ಲಿ ಮೂಲವ್ಯಾದಿ, ಕಾರಣವಿಲ್ಲದೆ ಜನವಿರೋಧಿ, ಸ್ತ್ರೀನಾಶ, ಉತ್ಸಾಹ
ತ.

೯ ರಲ್ಲಿ ದೃಷ್ಟಿಹೀನ, ಸುಳ್ಳುಗಾರ ಅಣ್ಣತಮ್ಮಂದಿರಿಗೆ ಹಿಂಸೆ, ಮ್ಲೇಚ್ಛದ್ವಾರ
ನ, ಭುಜವ್ಯಾಧಿ.

೧೦ ರಲ್ಲಿ ವಿಷಯಸುಖಿ, ಸಂತೋಷಿ, ಬಂಧುಗಳು ಕೆಟ್ಟವರು, ತೀರ್ಥಯಾತ್ರಾ
ನ್ಯನದೀಸ್ನಾನಾದಿ ಫಲವುಳ್ಳವನು, ತಂದೆಗೆ ಸೌಖ್ಯವಿಲ್ಲ, ವಾಹನ ನಿಮಿತ್ತವಾಗಿ
ಭೆಪಡುವನು.

೧೧ ರಲ್ಲಿ ಭಾಗ್ಯವುಳ್ಳವನು. ವಿದ್ಯಾವಂತ, ಭಯಸ್ಥ, ಭಾಗ್ಯಹೀನ, ಸಂತಾನ
ದ್ಧಿವಂತ, ಎಲ್ಲಾ ವಸ್ತುಗಳಿಂದಲೂ ಲಾಭ ಹೊಂದುವನು.

೧೨ ರಲ್ಲಿ ಚಪಲಚಿತ್ತ, ಕೆಟ್ಟದಷ್ಟಿ, ಪರದೇಶವಾಸ, ನೀಚಸ್ತ್ರೀಹಿತನು, ಸಂಚಾರಿ
ೀಶತ್ಯಾಗ, ಅಪಾತ್ರ ಪ್ರೀತಿ, ಮೋಕ್ಷ.

...........

## ಬಾಲಾರಿಷ್ಟಗಳು

ಲಗ್ನಕ್ಕೆ ೧-೭-೮-೧೨ ಈ ಸ್ಥಾನದಲ್ಲಿ ಚಂದ್ರನು ಕ್ರೂರ ಗ್ರಹಗಳಿಂದೊಡ
ಡಿ ಶುಭಗ್ರಹಗಳ ವೀಕ್ಷಣೆಯಿಲ್ಲದೆಯೂ, ಕೇಂದ್ರ ಸ್ಥಾನದಲ್ಲಿ ಶುಭಗ್ರಹಗಳು
ದೆಯೂ ಇದ್ದರೆ ಹುಟ್ಟಿದ ಶಿಶುವು ಆ ಕ್ಷಣದಲ್ಲಿಯೇ ಸಾಯುವುದು.
-೭-೧೦ ಕೇಂದ್ರಗಳಲ್ಲಿ ಪಾಪ ಗ್ರಹಗಳು, ಚಂದ್ರನೂ ಇದ್ದರೆ ಮರಣ ಹೊಂದು
, ೭-೮-೧-೪ ರಲ್ಲಿ ಇರುವ ಪಾಪಗ್ರಹಗಳ ಮಧ್ಯದಲ್ಲಿ ಚಂದ್ರನಿದ್ದು ಅಬಲ
ಶುಭಗ್ರಹಗಳಿಂದ ನೋಡಲ್ಪಟ್ಟರೆ ಮರಣಘಂಟಾಗುವದು. ಕ್ಷೀಣಚಂದ್ರನು
ದಲ್ಲಿದ್ದು ಶುಭಗ್ರಹ ವೀಕ್ಷಣೆಯಿಲ್ಲದೆಯೂ ಅಷ್ಟಮ ಕೇಂದ್ರಗಳಲ್ಲಿ ಪಾಪಗ್ರಹ
ದ್ದರೂ ಶಿಶುವಿಗೆ ಮರಣ. ೧-೭ ರಲ್ಲಿ ಪಾಪಗ್ರಹಗಳಿದ್ದು ೧-೭ ರಲ್ಲಾದರೂ
ಸ್ಥಳದಲ್ಲಾದರೂ ಇರುವ ಚಂದ್ರನು ಕ್ರೂರ ಗ್ರಹಗಳಿಂದ ನೋಡಲ್ಪಟ್ಟು
ಗ್ರಹಗಳಿಂದ ನೋಡಲ್ಪಡದೆ ಇದ್ದರೆ ಶಿಶುವಿಗೆ ಮರಣ. ೧-೪-೭-೧೦-೫-೯
ರಾಶಿಗಳಲ್ಲಿ ಪಾಪಗ್ರಹವೂ ೬-೮-೧೨ ಈ ರಾಶಿಗಳಲ್ಲಿ ಶುಭಗ್ರಹಗಳೂ ಇದ್ದು
ದಲ್ಲಿ ರವಿಯಿದ್ದರೆ ಶಿಶುವಿಗೆ ಮರಣ. ೧೨ ರಲ್ಲಿ ಚಂದ್ರನೂ ೮-೧ ರಲ್ಲಿ ಪಾಪ
ಗಳೂ ಇದ್ದು ಕೇಂದ್ರದಲ್ಲಿ ಶುಭಗ್ರಹರಹಿತವಾದರೆ ಶಿಶುವಿಗೆ ಮರಣ. ಲಗ್ನ
ಚಂದ್ರನು ೮ರಲ್ಲಿ ಕುಜನು ೯ರಲ್ಲಿ ರವಿಯು ೧೨ ರಲ್ಲಿ ಶನಿಯು ಇದ್ದು ಗುರು
ಇಲ್ಲವಾದರೆ ಶಿಶುವಿಗೆ ಮರಣ. ರವಿಯೂ ಚಂದ್ರನೂ ಲಗ್ನದಲ್ಲಿದ್ದು
-೯ ರಲ್ಲಿ ಶುಭಗ್ರರಹಿತವಾಗಿ ಪಾಪಗ್ರಹಗಳಿಂದ ಕೂಡಿ ಇದ್ದರೆ ಶಿಶುವಿಗೆ ತಕ್ಷಣ

ದಲ್ಲೇ ಮರಣ. ಲಗ್ನದಲ್ಲಿ ರವಿ ಶನಿಯೂ ೮ರಲ್ಲಿ ಪಾಪಗ್ರಹಗಳೂ ಇದ್ದು ಕೇಂದ್ರದಲ್ಲಿ ಗುರುವಿಲ್ಲದೆ ಇದ್ದರೆ ಶಿಶುವಿಗೆ ಮರಣ. ಲಗ್ನದಲ್ಲಿ ಶನಿಯೂ ೨ರ ಕುಜನೂ ಇದ್ದು ಗುರುವು ಕೇಂದ್ರದಲ್ಲಿ ಇಲ್ಲದೆ ಇದ್ದರೆ ಶಿಶುವು ಸತ್ತು ಬೀಳುವುದು ಗುರುವು ಕೇಂದ್ರದಲ್ಲಿ ಇಲ್ಲದೆ ಚಂದ್ರನಾದರೂ ಕುಜನಾದರೂ ಅಲ್ಲಿ ಇದ್ದು ೮ ರ ಪಾಪಗ್ರಹವಿದ್ದರೆ ಶಿಶುವಿಗೆ ತಕ್ಷಣದಲ್ಲಿ ಮರಣ. ದ್ರೇಕ್ಕಾಣರಾಶಿಗೆ ಸಪ್ತಮ ರಾಶಿಯಲ್ಲಿ ಪಾಪಗ್ರಹವಿದ್ದು ಲಗ್ನದಲ್ಲಿ ಚಂದ್ರನಿದ್ದರೆ ತಕ್ಷಣ ಶಿಶುವಿಗೆ ಮರಣ ಆಯುಸ್ಸ್ಥಾನದಲ್ಲಿ ಬಹಳ ಗ್ರಹಗಳಿದ್ದರೆ ಶಿಶುವು ತಿಂಗಳು ಅಥವಾ ಏಳುದಿವ ಪಾವರೂ ಬದುಕುತ್ತೆ. ಮೀನಲಗ್ನದಲ್ಲಿ ಹುಟ್ಟಿದವನಿಗೆ ಚಂದ್ರನೂ ರವಿಯೂ ೩ನೆ ಕಡೆ ಇದ್ದರೆ ರೋಗದೊಡನೆ ಕೂಡಿ ೩ ದಿವಸ ಬದುಕುತ್ತಾನೆ, ಮತ್ತು ಜನ್ಮನಕ್ಷತ್ರಕ ಮೂರನೆ ನಕ್ಷತ್ರದಲ್ಲಿ ರವಿಯಿದ್ದು ರವಿಯೊಡನೆ ಚಂದ್ರನೂ ಸೇರಿ ಲಗ್ನಕ್ಕೆ ೧೦ನೆಕ ಇದ್ದರೆ ಶಿಶುವು ಒಂದು ದಿವಸ ಮಾತ್ರ ಬದುಕುವನು. ಚಂದ್ರನಿದ್ದ ರಾಶಿಗೆ ೭ ರಾಶಿಯಲ್ಲಿ ಕುಜ ರವಿಗಳಿದ್ದರೆ ವ್ಯಾಧಿಯಿಂದ ೭ ದಿನ ಬದುಕುವನು. ಮೇಷಾದಿ ೬ ರಾಶಿಗಳಿಗೆ ಸವ್ಯವೆಂತಲೂ ತುಲಾದಿ ೬ ರಾಶಿಗಳಿಗೆ ಅಪಸವ್ಯವೆಂತಲೂ ಹೆಸರು ಸವ್ಯರಾಶಿಗಳಲ್ಲಿ ಪಾಪಗ್ರಹವಿದ್ದು ಆ ಸ್ಥಾನವು ಲಗ್ನಕ್ಕೆ ೪ನೆಯದಾಗಿಯೂ, ಅಪಸವ್ಯ ದಲ್ಲಿ ಪಾಪಗ್ರಹವಿದ್ದು ಆ ಸ್ಥಾನವು ಚಂದ್ರನಿಗೆ ಅಷ್ಟಮರಾಶಿಯಾದರೆ ಶಿಶು ರೋಗಿಯಾಗಿ ೧೦ ದಿವಸ ಬದುಕುವುದು. ಮೇಷಾದಿ ೬ ರಾಶಿಗಳೊಳಗೆ ರವಿಯಿದ್ದು ಲಗ್ನಕ್ಕೆ ಆ ರಾಶಿಯು ೫-೯ನೇದಾಗಿ ತುಲಾದಿ ೬ ರಾಶಿಗಳಲ್ಲಿ ಚಂದ್ರನಿದ್ದರೆ ಹುಟ್ಟಿದ ಶಿಶುವು ೧೦ ದಿವಸ ಬದುಕುವದು. ಲಗ್ನಕ್ಕೆ ೫-೯ರಲ್ಲಿ ಚಂದ್ರನಿದ್ದು ೪-೮ರಲ್ಲಿ ರವಿ ಯಿದ್ದರೆ ೩ ದಿವಸ ಕೆಟ್ಟ ವ್ಯಾಧಿಸಹಿತ ಬದುಕುವುದು. ನಾಲ್ಕರಲ್ಲಿ ಚಂದ್ರನೂ ಆರರಲ್ಲಿ ರವಿಯೂ ಇದ್ದರೆ ೧೮ ದಿವಸ ವ್ಯಾಧಿಸಹಿತ ಬದುಕುತ್ತದೆ. ಚಂದ್ರನಿದ್ದ ರಾಶಿಗೆ ೫-೯ರಲ್ಲಿ ರವಿಯಿದ್ದರೆ ವ್ಯಾಧಿಯಿಂದ ೨೦ ದಿವಸ ಬದುಕುತ್ತಾನೆ. ಅಷ್ಟಮ ದಲ್ಲಿರುವ ರವಿಯು ಕುಜ ಶನಿಗಳಿಂದ ನೋಡಲ್ಪಟ್ಟರೆ ವ್ಯಾಧಿಸಹಿತ ಹುಟ್ಟಿ ಮರಣ ಹೊಂದುವನು. ಕುಜನು ಲಗ್ನದಲ್ಲಿ ಶುಕ್ರನು ಕೇಂದ್ರದಲ್ಲಿ ಇದ್ದು ಪುನಃ ಕುಜನು ತಾನು ಇದ್ದ ರಾಶಿಗೆ ಬಂದರೆ ಮರಣವು. ಮಿಥುನ ಕನ್ಯಾ ತುಲಾ ಕುಂಭರಾಶಿಗಳ ಲಗ್ನವಾಗಿ ಆ ಲಗ್ನದಲ್ಲಿ ರವಿ ಕುಜ ಶನಿ ಚಂದ್ರರಿದ್ದು ಪುನಃ ಆರಾಶಿಗೆ ಬಂದರೆ ಮರಣ

ಮೇಷ-ವೃಶ್ಚಿಕಗಳಿಗೆ ೫-೯ರಲ್ಲಿ ಗುರುವಿದ್ದು ಗುರುವಿಗೆ ೧-೫-೭-೧೦ ರಲ್ಲಿ ಲಗ್ನಾಧಿಪತಿಯಾದ ಕುಜನಿದ್ದರೆ ತಕ್ಷಣ ಮರಣ. ಶುಭಗ್ರಹಗಳ ಸಂಬಂಧವಿಲ್ಲದ ಕ್ಷೀಣ ಚಂದ್ರನು ಪಾಪಗ್ರಹಗಳಿಂದ ಕೂಡಿ ೫-೯-೧-೭-೮ರಲ್ಲಿ ಇದ್ದರೂ ಮರಣ.

ಲಗ್ನದಲ್ಲಿರುವ ಶನಿಯು ಪಾಪಗ್ರಹದಿಂದ ಕೂಡಿ ಇದ್ದರೆ ಒಂದು ತಿಂಗಳು ಬದುಕುವನು. ಪಾಪಗ್ರಹಗಳ ದೃಷ್ಟಿ ಸಂಬಂಧವಿಲ್ಲದೆ ಇದ್ದರೆ ಒಂದು ವರುಷ ಬದುಕುವನು.

ಆರರಲ್ಲಿ ಲಗ್ನಾಧಿಪತಿಯು ಮೇಷಾದಿಯಾಗಿ ತಾನಿರುವ ರಾಶಿಯ ವರೆಗೆ ಎಷ್ಟು ಖ್ಯೆಯಾಗುತ್ತೋ ಅಷ್ಟನೇ ವರುಷದಲ್ಲಿ ಕೊಲ್ಲುತ್ತಾನೆ. ಆರರಲ್ಲಿ ಇರುವ ದ್ರೇಕಾ ಧಿಪತಿಯು ಮೇಷಾದಿಯಾಗಿ ತಾನು ಇರುವ ರಾಶಿ ಸಂಖ್ಯೆಯ ಮಾಸಗಳಲ್ಲಿ ಲ್ಲುತ್ತಾನೆ. ಆದರಲ್ಲಿರುವ ನವಾಂಶಾಧಿಪತಿಯು ಮೇಷಾದಿಯಾಗಿ ಕಳೆದಿರುವ ಸಂಖ್ಯೆ ದಿನಗಳಲ್ಲಿ ಕೊಲ್ಲುತ್ತಾನೆ. ಈ ಮೇಲ್ಕಂಡ ಯೋಗವುಂಟಾಗಿ ತೆನ್ಮೂಲಕ ಲವಾದ ರಾಜಯೋಗವಿದ್ದರೂ ದರಿದ್ರನೇ ಅನುಭವಿಸುವನು.

ಅಷ್ಟಮರಾಶಿಯು ವೃಷಭ ತುಲೆಯಾಗಿ ಅಲ್ಲಿ ಶನಿ-ಕುಜ-ರವಿ ಇದ್ದರೆ ಒಂದು ಳು ಬದುಕುವನು. ಬೇರೆ ಯಾವ ಬಲವೂ ಇಲ್ಲದೆ ಲಗ್ನದಲ್ಲಿ ಕೇತುವಿದ್ದರೆ ತು ತಿಂಗಳಲ್ಲಿ ಮರಣ.

ರವಿಯು ಪಾಪಗ್ರಹಗಳಿಂದ ನೋಡಲ್ಪಟ್ಟು ಅವದಿರುವ ರಾಶಿಯು ಮೇಷ- ಶ್ಚಿಕ- ಮಕರ-ಕುಂಭ ಲಗ್ನಕ್ಕೆ ಹತ್ತನೇ ರಾಶಿಯಾದರೆ ಮರಣ ಸಂಭವಿಸುವುದು.

ಮೇಷ-ವೃಷಭ- ಕರ್ಕಾಟಕ ರಾಶಿಗಳು ವಿನಹ ಮಿಕ್ಕ ರಾಶಿಗಳು ಲಗ್ನವಾಗಿ ರ ಗ್ರಹಗಳಿಂದ ನೋಡಲ್ಪಟ್ಟ ಕ್ಷೀಣ ಚಂದ್ರನು ಅಲ್ಲಿದ್ದರೆ ಜಾತಕನಿಗೆ ಮರಣ.

ಶುಭಗ್ರಹಗಳಿಂದ ನೋಡದೆ ವಕ್ರ ಗ್ರಹಗಳನ್ನು ಪಾಪ ಗ್ರಹಗಳು ನೋಡಿ ನೇ ಕಡೆ ಶುಭಗ್ರಹವಿದ್ದರೆ ಒಂದು ತಿಂಗಳಲ್ಲಿಯೂ ಚಂದ್ರನಿದ್ದರೆ ಶೀಘ್ರ ಯೂ ಶುಭಗ್ರಹ ದೃಷ್ಟಿಯಿದ್ದರೆ ೮ ವರುಷದಲ್ಲಿಯೂ ಮರಣವು ಬರುವುದು.

ಯುದ್ಧದಲ್ಲಿ ಪಾಪಗ್ರಹದಿಂದ ಸೋತುಹೋದ ಶುಭಗ್ರಹವು ಲಗ್ನಾಧಿಪತಿಯು ಲ್ಲಿ ಇದ್ದರೆ ಒಂದು ತಿಂಗಳು ಬದುಕುವನು. ಲಗ್ನಾಧಿಪತಿಯು ಕ್ರೂರ ಗ್ರಹ ಡನೆ ಕೂಡಿ ಶುಭಗ್ರಹ ದೃಷ್ಟಿಯಿಲ್ಲದೆ ೮ನೇ ಕಡೆ ಇದ್ದರೆ ಒಂದು ತಿಂಗಳು ಕುವನು.

ಲಗ್ನಾಧಿಪನು ೮ನೇ ಕಡೆ ಇದ್ದು ಬಹಳ ಪಾಪಗ್ರಹಗಳಿಂದ ನೋಡಲ್ಪಟ್ಟರೆ ೪ ಳಲ್ಲಿ ಮರಣ. ೨-೧೨-೬-೮ ಈ ರಾಶಿಗಳಲ್ಲಿ ಇರುವ ಪಾಪಗ್ರಹಗಳು ಶುಭ ಸಂಬಂಧವಿಲ್ಲದಿದ್ದರೆ ಎಂಟು ತಿಂಗಳು ಬದುಕುತ್ತಾನೆ.

ವೃಷಭ-ತುಲಾ ರಾಶಿಗಳು ಲಗ್ನಕ್ಕೆ ೮ನೇ ರಾಶಿಯಾಗಿ ಅಲ್ಲಿ ಕ್ರೂರ ಗ್ರಹದಿಂದ ಡಲ್ಪಡುವ ಒಂದು ಪಾಪಗ್ರಹವಿದ್ದರೆ ಜಾತಕನು ಒಂದು ವರುಷ ಬದುಕುವನು.

೬-೮ನೇ ಕಡೆ ಇರುವ ಚಂದ್ರನು ಅಶುಭ ಗ್ರಹಗಳಿಂದ ನೋಡಲ್ಪಟ್ಟರೆ ಒಂದು ಳಾಗಲೀ ಒಂದು ವರುಷವಾಗಲೀ ಬದುಕುವನು. ೬-೮ರಲ್ಲಿ ಚಂದ್ರನಿದ್ದು ಗ್ರಹದಿಂದ ನೋಡಿದರೂ ಸೇರಿದರೂ ೮ ವರ್ಷ ಬದುಕುತ್ತಾನೆ. ೬-೮ ರಲ್ಲಿ ನಿದ್ದು ಎಲ್ಲಾ ಪಾಪಗ್ರಹಗಳಿಂದಲಾದರೂ ನೋಡಲ್ಪಟ್ಟರೂ ಸೇರಿದರೂ ೪ ಬದುಕುತ್ತಾನೆ. ೬-೮ ರಾಶಿಗಳಲ್ಲಿ ಚಂದ್ರನಿದ್ದು ಒಂದು ಪಾಪಗ್ರಹ ಮಾತ್ರ ಡಿದರೆ ಆ ಕ್ಷಣವೇ ಶಿಶುವು ಮೃತವಾಗುವುದು. ೬-೮ರಲ್ಲಿರುವ ಚಂದ್ರನನ್ನು ಶುಭಗ್ರಹ ನೋಡಿದರೆ ೨ ವರ್ಷ ೮ ತಿಂಗಳು, ೨ ಶುಭಗ್ರಹ ನೋಡಿದರೆ ೫ ೪ ತಿಂಗಳುಗಳು, ೩ ಶುಭಗ್ರಹಗಳು ನೋಡಿದರೆ ೮ ವರ್ಷಗಳಿಗೆ ಮರಣವು. ಶುಭಗ್ರಹ ಒಂದು ಪಾಪಗ್ರಹ ನೋಡಿದರೆ ೧ ವರ್ಷವು ೪ ತಿಂಗಳು, ೨ ಶುಭ

ಗ್ರಹ ೨ ಪಾಪಗ್ರಹ ನೋಡಿದರೆ ೨ ವರ್ಷವು ೮ ತಿಂಗಳು, ೩ ಶುಭಗ್ರಹ ೩ ಪಾಪ ಗ್ರಹ ನೋಡಿದರೆ ೪ ವರ್ಷವು ಬದುಕುವನು.

ಮೇಷ ವೃಶ್ಚಿಕವು ೬-೮-೧-೪-೭-೧೦ ಈ ರಾಶಿಗಳಲ್ಲಿ ಯಾವುದಾದರೂ ಆಗಿ ಅಲ್ಲಿ ವಕ್ರಶನಿ ಇದ್ದು ವಕ್ರಕುಜನು ನೋಡಿದರೆ ೨ ವರ್ಷ ಬದುಕುವನು.

ಮೇಷ ವೃಶ್ಚಿಕ ಅಷ್ಟಮವಾಗಿ ಅಲ್ಲಿ ಗುರುವಿದ್ದು ಶುಕ್ರನು ನೋಡಿದರೂ ಚಂದ್ರ-ರವಿ-ಕುಜ-ಶನಿ ಇವರು ನೋಡಿದರೂ ೩ ವರ್ಷ ಬದುಕುವನು.

ಲಗ್ನಾಧಿಪತಿಗೆ ಅಷ್ಟಮದಲ್ಲಿ ಕ್ಷೀಣಚಂದ್ರನಿದ್ದು ಶುಭಗ್ರಹ ನೋಡದೆ ಅಶುಭ ಗ್ರಹ ನೋಡಿದರೂ ಸಂಬಂಧವಾದರೂ ೩ ವರ್ಷ ಬದುಕುತ್ತಾನೆ.

ಲಗ್ನಕೇಂದ್ರದಲ್ಲಿ ಕ್ಷೀಣಚಂದ್ರನು ಕುಜ ಶನಿಗಳಿಂದ ನೋಡಿದರೂ ಕೂಡಿದರೂ ೪ ವರ್ಷ ಬದುಕುತ್ತಾನೆ. ೬-೮-೧ ಈ ಮನೆಗಳಲ್ಲಿರುವ ಬುಧನನ್ನು ಕರ್ಕಾಟಕ ದಲ್ಲಿರುವ ಚಂದ್ರನು ನೋಡಿದರೂ ಕೂಡಿದರೂ ೪ ವರ್ಷ ಬದುಕುತ್ತಾನೆ. ಲಗ್ನಾಧಿಪನು ಚಂದ್ರನಾಗಿದ್ದು ಅವನೂ ನವಾಂಶಾಧಿಪನೂ ಸಹಾ ಅಸ್ತಂಗತರಾದರೆ ಕೆಲವು ದಿವಸವಿದ್ದು ಮರಣವನ್ನು ಪಡೆಯುತ್ತಾನೆ.

ಚಂದ್ರ ಲಗ್ನಾಧಿಪ ಈ ಇಬ್ಬರೂ ೮-೬-೧೨ ರಲ್ಲಿ ಅಸ್ತಂಗತರಾಗಿ ಇದ್ದರೆ ಮೇಷಾಧಿಯಾಗಿ ಆ ಗ್ರಹಗಳಿರುವವರೆ ಎಣಿಸಿದರೆ ಎಷ್ಟು ಸಂಖ್ಯೆಯಾಗುತ್ತದೋ ಆ ವರ್ಷದಲ್ಲಿ ಮರಣ.

ಲಗ್ನದಲ್ಲಿ ರವಿ, ಕುಜ, ಶನಿ ಇದ್ದು ಸಪ್ತಮದಲ್ಲಿ ಕ್ಷೀಣ ಚಂದ್ರನಿಗೆ ಗುರುದೃಷ್ಟಿ ಇಲ್ಲದೆ ಶತ್ರುಸ್ಥಾನವಾಗಿದ್ದರೆ ೭ ವರ್ಷ ಬದುಕುತ್ತಾನೆ.

ಲಗ್ನದಲ್ಲಿ ಕ್ಷೀಣಚಂದ್ರನಿದ್ದು ೪ ರಲ್ಲಾದರೂ ೮ರಲ್ಲಾದರೂ ಪಾಪಗ್ರಹವಿದ್ದರೆ ೮ ವರುಷ ಬದುಕವನು.

ರವಿ ಚಂದ್ರಯುಕ್ತನಾದ ಶನಿಯು ವಕ್ರಮೂಢನಾದರೆ ೯ ವರ್ಷ ಬದುಕುತ್ತಾನೆ

ಪಾಪಗ್ರಹಗಳಿಂದ ನೋಡಲ್ಪಡುವ ರಾಹುವು ಕೇಂದ್ರದಲ್ಲಿದ್ದರೆ ೧೦ ಅಥವಾ ೧೭ ವರ್ಷಗಳು ಬದುಕುವನು.

ಬುಧನು ರವಿಚಂದ್ರರಿಂದ ಕೂಡಿ ಶುಭಗ್ರಹಗಳಿಂದ ನೋಡದೇ ಇದ್ದರೆ ೧೧ ವರ್ಷ ಬದುಕುತ್ತಾನೆ. ೭ರಲ್ಲಿರುವ ರಾಹುವನ್ನು ರವಿ ಚಂದ್ರರು ನೋಡಿ ಶುಭಗ್ರಹ ನೋಡದೆಯಿದ್ದರೆ ೧೨ ವರ್ಷ ಬದುಕುತ್ತಾನೆ.

ಜನನ ಕಾಲದಲ್ಲಿ ಕ್ರಮವಾಗಿ ಮೇಷದ ೮ನೇ ಭಾಗ ವೃಷಭದ ೯ನೇ ಭಾಗ ಮಿಥುನದ ೨೨ನೇ ಭಾಗ ಕಟಕ ೨೨ನೇ ಭಾಗ ಸಿಂಹದ ೫ನೇ ಭಾಗ ಕನ್ಯಾದ ೧ನೇ ಭಾಗ ತುಲಾದ ೪ನೇ ಭಾಗ ವೃಶ್ಚಿಕದ ೨೩ನೇ ಭಾಗ ಧನುಸಿನ ೧೮ನೇ ಭಾಗ ಮಕರದ ೨೦ನೇ ಭಾಗ ಕುಂಭದ ೭೧ನೇ ಭಾಗ ಮೀನದ ೧೦ನೇ ಭಾಗ ಇವುಗಳಲ್ಲಿ ಪಾಪಗ್ರಹ ಗಳ ನೋಟವಾದರೂ ಸಂಬಂಧವಾದರೂ ಇರುವ ಕ್ಷೀಣ ಚಂದ್ರನು ಇದ್ದರೆ ಆ ರಾಶಿಭಾಗದ ಸಂಖ್ಯೆಯ ವರ್ಷದಲ್ಲಿ ಮೃತನಾಗುತ್ತಾನೆ.

೧-೩-೪-೫-೭-೯-೧೧ ಈ ಸ್ಥಾನಗಳಲ್ಲಿ ಗುರಿಯಿದ್ದರೆ ೨೧-೪೦-೨೧-೧೮೦ ೦-೬೦-೩೦ ವರುಷಗಳು ಬದುಕುತ್ತಾನೆ.

ಸಪ್ತಮ ಅಷ್ಟಮಗಳಲ್ಲಿ ಪಾಪಗ್ರಹಗಳಿದ್ದು ಲಗ್ನವನ್ನು ಪಾಪರು ನೋಡಿದರೆ ಾಯಿ ಸಹಿತ ಶಿಶುವಿಗೆ ಮರಣ. ಶುಭಗ್ರಹಗಳು ಲಗ್ನವನ್ನು ನೋಡಿದರೆ ವ್ಯಾಧಿ ುಂಟಾಗುವುದು.

ಚಂದ್ರ ರವಿಗಳು ಪಾಪಗ್ರಹಗಳ ಮಧ್ಯದಲ್ಲಿದ್ದು, ಶುಭಗ್ರಹಗಳಿಂದ ನೋಡ ್ಪಡದಿದ್ದರೆ ಮಾತೃಸಹಿತ ಮರಣ.

ದ್ವಾದಶದಲ್ಲಿ ರವಿಯಿದ್ದು ಚತುರ್ಥದಲ್ಲಿ ಕುಜನಿದ್ದು ಚಂದ್ರ ಕ್ಷೀಣನಾಗಿದ್ದರೆ ಮಾತೃ ಸಹಿತ ಮರಣ.

ಮೇಲಿನಂತೆ ಇದ್ದು ಚಂದ್ರನನ್ನು ಬಿಟ್ಟು ಶುಕ್ರನು ಪಾಪಮಧ್ಯದಲ್ಲಿ ಇದ್ದರೆ ಾಯಿ ಸಹಿತ ಮರಣ.

ಲಗ್ನದಲ್ಲಿ ಕುಜ ಸಪ್ತಮದಲ್ಲಿ ರವಿಯಿದ್ದರೆ ಮಾತೃ ಸಹಿತ ಶಸ್ತ್ರದಿಂದ ಮರಣ.

೧-೧೨ರಲ್ಲಿ ಪಾಪಗ್ರಹಗಳಿದ್ದು ಶುಭಗ್ರಹಗಳಿಂದ ನೋಡಲ್ಪಡದೆ ಪಾಪಗ್ರಹ ಳಿಂದ ನೋಡಿದರೆ ತಾಯಿ ಸಹಿತ ಮರಣ.

ರವಿ ಚಂದ್ರರು ಗ್ರಹಣವುಳ್ಳವರಾಗಿದ್ದು ೮ರಲ್ಲಿ ಕುಜನಿದ್ದರೆ ಮಾತೃ ಸಹಿತ ುರಣ. ರವಿಯಾದರೆ ತಮ್ಮ ಶಸ್ತ್ರದಿಂದಲೇ ಮರಣ.

ಚಂದ್ರನಿರುವ ರಾಶಿಯಿಂದ ೯-೮-೭ ಈ ಸ್ಥಾನಗಳಲ್ಲಿ ಎಲ್ಲಾ ಪಾಪಗ್ರಹ ಳಿದ್ದರೆ ತಾಯಿ ಸಹಿತ ಮರಣ. ೧-೮-೬-೧೨-೭ ಈ ಸ್ಥಾನಗಳಲ್ಲಿ ಪಾಪಗ್ರಹಗಳಿ ್ರೆ ತಾಯಿ ಸಹಿತ ಮರಣ.

೬-೮-೧೨ ರಲ್ಲಿ ಪಾಪಗ್ರಹಗಳಿದ್ದರೆ ತಾಯಿ ಬದುಕುವಳು, ಶಿಶುವಿಗೆ ಮರಣ. ೮-೭ರಲ್ಲಿ ಪಾಪಗ್ರಹಗಳಿದ್ದರೆ ತಾಯಿಗೆ ಮಾತ್ರ ಮರಣ. ಶನಿ ಕುಜರಿಂದ ನೋಡ ಡುವ ಚಂದ್ರನು ಅಶುಭದಿಂದ ನೋಡಲ್ಪಟ್ಟು ಶುಭಗ್ರಹಗಳಿಂದ ನೋಡದೆ ಇದ್ದು ನಃ ತಾನಿದ್ದ ರಾಶಿಗೆ ಬಂದರೆ ತಾಯಿಗೆ ಮರಣ. ಅಶುಭರಿಂದ ನೋಡ ಟ್ಟಾಗಲೇ ಆದರೂ ಮರಣವು. ಚಂದ್ರನಿಗೆ ಸಪ್ತಮದಲ್ಲಿ ಪಾಪಗ್ರಹವಿದ್ದರೆ ಾಯಿಗೆ ಮರಣ. ಚಂದ್ರನಿಗೆ ೧೦ ನೇ ಕಡೆ ಪಾಪಗ್ರಹ ಸಂಬಂಧವಾದ ರವಿಯಿದ್ದರೆ ಾತೃ ಮರಣ. ಶುಕ್ರನಿಗೆ ಪಂಚಮದಲ್ಲಿ ರವಿಯಿದ್ದು ಶುಕ್ರನು ಶನಿಯಿಂದ ನೋಡ ್ಟರೂ ಕೂಡಿದರೂ ಮಾತೃವಿಗೆ ಮರಣ.

ರಾತ್ರಿ ಪ್ರಸವವಾಗಿ ಚಂದ್ರನಿಗೆ ೫-೯ ರಲ್ಲಿ ಶನಿಯಿದ್ದರೂ ಹಗಲು ಪ್ರಸವವಾಗಿ ಕ್ರನ ೫-೯ರಲ್ಲಿ ಪಾಪಗ್ರಹ ದೃಷ್ಟನಾದ ಕುಜನಿದ್ದರೂ ಅಥವಾ ಲಗ್ನದಲ್ಲಿ ಕುಜ ಗಳಿದ್ದು ಇವರ ಮಧ್ಯದಲ್ಲಿ ಚಂದ್ರನಿದ್ದು ಅಷ್ಟಮದಲ್ಲಿ ರವಿ ಇದ್ದರೆ ತಾಯಿಗೂ ಸ ಮರಣ.

ರವಿ ಇರುವ ಸ್ಥಾನಕ್ಕೆ ಅಷ್ಟಮದಲ್ಲಿ ಕುಜ ಶನಿಗಳಿದ್ದು ಶುಭಗ್ರಹ ದೃಷ್ಟಿಯಿಲ್ಲದೆ ಇದ್ದರೆ ತಂದೆಗೆ ಸದ್ಯೋಮರಣ. ಶನಿ ಕುಜರ ಸಂಬಂಧವಾಗಲೀ ದೃಷ್ಟಿಯಾಗಲೀ ಇದ್ದು ರವಿಯು ಆ ಎರಡು ಗ್ರಹಗಳ ಮಧ್ಯದಲ್ಲಿ ಇದ್ದರೆ ತಂದೆಗೆ ಮರಣ.

ರವಿಯು ಕ್ರೂರಗ್ರಹದಿಂದ ಕೂಡಿ ಚರರಾಶಿಯಲ್ಲಿದ್ದರೆ ತಂದೆಗೆ ಅಲ್ಪಾಯು ವಿಷಜಲ ಶಸ್ತ್ರಗಳಿಂದ ಮರಣವು. ಹಗಲು ರವಿಯು ಚರರಾಶಿಯಲ್ಲಿದ್ದು ಕುಜನಿಂದ ನೋಡಿದರೆ ತಂದೆ ದೇಶಾಂತರದಲ್ಲಿ ಇದ್ದಾನೆಂದು ಹೇಳುವುದು, ಲಗ್ನವನ್ನು ಚಂದ್ರ ನೋಡದೆ ಇದ್ದರೆ ಜಾತಕನ ತಂದೆಯು ಪರೋಕ್ಷವಾಗಿದ್ದಾನೆಂದು ಹೇಳುವದು. ಲಗ್ನದಲ್ಲಿ ಶನಿ ಅಥವಾ ಕುಜನಿದ್ದು ಬುಧ ಶುಕ್ರರ ಮಧ್ಯದಲ್ಲಿ ಚಂದ್ರನಿದ್ದರೆ ತಂದೆ ದೂರದಲ್ಲಿರುತ್ತಾನೆ.

ಜನನವು ರಾತ್ರಿಯಾಗಿ ಚರರಾಶಿಯಲ್ಲಿ ಶನಿ ಇದ್ದು ಕುಜನಿಂದ ನೋಡಲ್ಪಟ್ಟರೆ ತಂದೆ ದೇಶಾಂತರದಲ್ಲಿದ್ದಾನೆ. ಈ ಯೋಗದಲ್ಲೇ ಕುಜನೊಡನೆ ಕೂಡಿದರೆ ತಂದೆ ದೇಶಾಂತರದಲ್ಲಿ ಮೃತನಹನು.

ಕೃಷ್ಣಪಕ್ಷದ ಕಟಕರಾಶಿ ಪಾಪಸಂಬಂಧವಾದ ಬುಧನ ಮನೆ ಶನಿ ಕುಜರು ಪಾಪರಾಶಿಗಳೂ ಆಗಿ ರವಿಯಿದ್ದ ರಾಶಿಗೆ ೭-೫-೯ನೇ ರಾಶಿಗಳಾಗಿ ಅಲ್ಲಿ ಪಾಪಗ್ರಹಗಳಿದ್ದರೆ ಜಾತಕನ ತಂದೆಗೆ ದೂರದಲ್ಲಿ ಬಂಧನವಾದರೂ ಸಂಭವಿಸುವುದು. ಗ್ರಹಣದ ಅನಂತರ ಆರು ತಿಂಗಳು ರಾಹು ಬಲಿಷ್ಠನು. ೫-೯ರಲ್ಲಿ ರಾಹು ಕ್ರೂರ ಸಂಬಂಧವಾಗಿ ಅಥವಾ ಯುಕ್ತನಾಗಿ ಇದ್ದರೂ ಜಾತಕನ ತಂದೆಗೆ ಮರಣ.

ಲಗ್ನಾಧಿಪನೂ ಚಂದ್ರನೂ ಇಬ್ಬರೂ ಒಂದೇ ರಾಶಿಯಲ್ಲಿದ್ದರೂ ಸಮರಾದರೂ ಅದಕ್ಕೆ ಸಮರಾದರೂ ಅದಕ್ಕೆ ಸಮರಾಶಿಯೆಂತಲೂ ಲಗ್ನಾಧಿಪತಿಗೂ ಚಂದ್ರ ಲಗ್ನಾಧಿಪತಿಗೂ ಶತ್ರುಸ್ಥಾನ ಅಥವಾ ಆ ಚಂದ್ರನಿಗೆ ೬-೮-೧೨ ಈ ರಾಶಿಗಳು ವಿಷಮ ರಾಶಿಯೆಂತಲೂ ತಿಳಿಯಬೇಕು. ಸ್ತ್ರೀ ಪುರುಷರ ಜನ್ಮದಲ್ಲಿ ಯಾವದಾಗಲಿ ಈ ಮೇಲೆ ಹೇಳಿರುವಂತೆ ಸಮರಾಶಿಯೆಂಬುದರಲ್ಲಿ ಜನನವಾದರೆ ಒಂದೇ ಪ್ರಕಾರ ನಡತೆಯುಳ್ಳವರಾಗಿಯೂ ವಿಷಮರಾಶಿಯಲ್ಲಿ ಹುಟ್ಟಿದರೆ ಕೆಟ್ಟ ನಡತೆವುಳ್ಳವರಾಗಿಯೂ ಇರುವರು. ತಂದೆಯು ಜನ್ಮ ನಕ್ಷತ್ರದಲ್ಲಿ ಹುಟ್ಟಿದರೂ ಜನ್ಮನಕ್ಷತ್ರ ಅಂಶಲಗ್ನ ಒಂದೇ ಆದರೂ ತಂದೆಗೆ ಮರಣ. ಆ ಲಗ್ನವನ್ನು ಶುಭಗ್ರಹ ನೋಡಿದರೆ ಒಂಬು ತಿಂಗಳವರೆಗೆ ಬದುಕುತ್ತಾನೆ. ಈ ಯೋಗದಲ್ಲಿ ಸ್ತ್ರೀ ಜನನವಾದರೆ ತಾಯಿಗೆ ಮರಣ.

ಜ್ಯೇಷ್ಠಾನಕ್ಷತ್ರ ೧ನೇ ಘಳಿಗೆಯಲ್ಲಿ ಹುಟ್ಟಿದರೆ ತಾಯಿಗೂ ೨ನೇ ಘಳಿಗೆ ತಂದೆಗೂ ೩ನೇ ಘಳಿಗೆಯಲ್ಲಿ ಭ್ರಾತೃವಿಗೂ ಮರಣವು. ೪ನೇ ಘಳಿಗೆಯಲ್ಲಿ ದ್ರವ್ಯನಾಶವು-ಮೂಲ ೩ನೇ ಪಾದದಲ್ಲಿ ಹುಟ್ಟಿದರೆ ತಂದೆಯು ಮುಖ ನೋಡದೆ ೮ ವರುಷ ಇರಬೇಕು. ತಂದೆಯು ನೋಡಿದರೆ ಆತನಿಗೆ ಮರಣ. ಸ್ತ್ರೀ ಶಿಶುವಿಗೂ ಇದೇರೀತಿ ಮೂಲ ೧ನೇ ಪಾದ ಪಿತೃನಾಶ, ೨ನೇ ಪಾದ ಮಾತೃನಾಶ, ೩ನೇ ಪಾದ ಧನನಾಶ,

ನೇ ಪಾದದಲ್ಲಿ ಕುಲ, ಧನ, ಪುಣ್ಯ, ಪುತ್ರ, ನಿರೋಗ, ರಾಜಪುರಸ್ಕಾರ, ಸುಖ
ಸ ಹೊಂದುತ್ತಾನೆ. ಆಶ್ಲೇಷೆಗೂ ಇದೇ ಫಲ. ಅಂಶದಿಂದ ವಿಪರೀತ ಫಲವು.

ಕರ್ಕಾಟಕ ಲಗ್ನದಲ್ಲಿ ಗಂಡು ಹುಟ್ಟಿದಾಗ ಪುಷ್ಯವಾದರೂ ಧನುರ್ಲಗ್ನದಲ್ಲಿ ಂಡು ಹುಟ್ಟಿದಾಗ ಪೂರ್ವಾಷಾಢ ನಕ್ಷತ್ರವಾದರೂ ತಂದೆಗೆ ಮರಣ. ಪುತ್ರಿಯಾದರೆ ಯಿಗೆ ಮರಣ. ಮೇಲೆ ಹೇಳಿದ ಯೋಗದಲ್ಲಿ ಎರಡು ನಕ್ಷತ್ರಗಳಿಗೂ ೧ ನೇ ದ ಪಿತೃ, ೨ ನೇ ಪಾದ ಮಾತೃ, ೩ ನೇ ಪಾದ ಶಿಶುವು, ೪ ನೇ ಪಾದ ೋದರಮಾವ ಇವರು ಮೃತರಾಗುತ್ತಾರೆ. ಶುಭಗ್ರಹ ದೃಷ್ಟಿಯಿದ್ದರೆ ಇಲ್ಲ. ಕನ್ಯಾ ಗ್ನದಲ್ಲಿ ಹುಟ್ಟಿದ ಶಿಶುವಿಗೆ ಚಿತ್ತಾ ನಕ್ಷತ್ರವಾದರೆ ಮೇಲಿನಂತೆಯೇ ಫಲವು. ಹಸ್ತಾ ರಣಿ ಈ ಎರಡು ನಕ್ಷತ್ರಗಳ ೧ ನೇ ಪಾದದಲ್ಲಿ ತಂದೆಗೆ ಮರಣ. ಪುಷ್ಯ ಪೂರ್ವಾ ಢ ೨ ನೇ ಪಾದದಲ್ಲಿ ತಂದೆಗೆ ಅರಿಷ್ಟ. ಕನ್ಯಾಲಗ್ನವಾಗಿ ಉತ್ತರಾ ೧ ನೇ ಪಾದ ಲ್ಲಿ ಹುಟ್ಟಿದರೆ ತಾಯಿಗೆ ಮರಣ.

ಚಂದ್ರನಕ್ಷತ್ರಕ್ಕೆ ಯಾವ ಫಲವೋ ಅದೇ ಫಲವು ಲಗ್ನ ನಕ್ಷತ್ರಕ್ಕೂ ಆಗುತ್ತೆ. ಂದ್ರ ನಕ್ಷತ್ರವಾದರೂ ಲಗ್ನನಕ್ಷತ್ರವಾದರೂ ಗುರುವಿಗೆ ವಧೆ. ತಾರೆಯಾದರೆ ಅದಕ್ಕೆ ಪವಾದವಿಲ್ಲ. ಜನ್ಮಲಗ್ನ ನಕ್ಷತ್ರಗಳು ರವಿಗೆ ವಿಪತ್ತಾರೆ ಪ್ರತ್ಯಕ್ತಾರೆ ವಧತಾರೆ ಾದರೆ ಅದಕ್ಕೆ ಅಪವಾದವೇ ಇಲ್ಲ.

ಮೂಲಾ ಮಘಾ ಅಶ್ವಿನೀ ಇವುಗಳ ಮೊದಲು ೨ ಘಳಿಗೆ, ಆಶ್ಲೇಷ ಜ್ಯೇಷ್ಠ ವತಿ ಈ ನಕ್ಷತ್ರಗಳ ಕೊನೆಯಲ್ಲಿ ೨ ಘಳಿಗೆ ಗಂಡಾಂತರಗಳು.

ಈ ಗಂಡಾಂತರಗಳ (ಮೊದಲಿನ) ೧ನೇ ಘಳಿಗೆಯಲ್ಲಿ ತಂದೆ, ೨ನೇ ಘಳಿಗೆಯಲ್ಲಿ ಯಿ, (ಕೊನೆಯ) ೧ನೇ ಘಳಿಗೆಯಲ್ಲಿ ಶಿಶುವು, ೨ನೇ ಘಳಿಗೆಯಲ್ಲಿ ಕೂಡ ಹುಟ್ಟಿ ನರಿಗೆ ಅರಿಷ್ಟವು. ಗ್ರಹಾಕಾಂಕ್ಷಿತ ನಕ್ಷತ್ರದಲ್ಲಿ ಹುಟ್ಟಿದವನು ದತ್ತುಪುತ್ರನು. ಗ್ರಹ ಟ್ಟು ನಕ್ಷತ್ರದಲ್ಲಿ ಹುಟ್ಟಿದವನು ರೋಗಿಷ್ಠನು. ವಿಷಮಾಂಶದಲ್ಲಿ ಚಂದ್ರನಿದ್ದರೆ ಶುವಿಗೆ ಮರಣ. ಕುಜನು ಚಂದ್ರಾಂಶದಲ್ಲಿದ್ದು ಚಂದ್ರನು ಪಂಚಮದಲ್ಲಿದ್ದರೆ ಆ ಗವೇ ಮರಣ. ಪಾಪಗ್ರಹಗಳಿಂದ ನೋಡಲ್ಪಟ್ಟು ಪಾಪದ್ರೇಕ್ಕಾಣದಲ್ಲಿ ಚಂದ್ರ ದ್ದರೆ ಸದ್ಯೋಮರಣ. ಶುಭ ಸಂಬಂಧವಿದ್ದರೆ ೧ ವರುಷಕ್ಕೆ ಮರಣ.

ಪಂಚಮಿ ದಶಮಿ ಪೌರ್ಣಮಿ ಈ ತಿಥಿಗಳ ಮೊದಲು ೨ ಘಳಿಗೆ ಷಷ್ಠಿ ಏಕಾದಶಿ ಡ್ಯ ಇವುಗಳ ಕೊನೆ ೨ ಘಳಿಗೆ ಗಂಡಾಂತರ ತಿಥಿಗಳು. ಮೀನ–ವೃಶ್ಚಿಕ–ಕರ್ಕಾಟಕ ವುಗಳ ಕಡೆ ನವಾಂಶವು. ಮೇಷ–ಸಿಂಹ–ಧನಸ್ಸು ಇವುಗಳ ಮೊದಲು ನವಾಂಶೆಯು ಂಡಾಂತರ ಅಂಶವು.

ಗಂಡಾಂತರ ತಿಥಿಗಳಲ್ಲಿ ಮಾತಾಪಿತೃಗಳಿಗೆ ಗಂಡಾಂಶದಲ್ಲಿ ತನಗೆ ಮರಣವು. ದುಕಿದರೆ ರಾಜನಾಗುತ್ತಾನೆ. ಸಮಸ್ತ ಗಂಡಾಂತರವಿದ್ದರೆ ಕುಲಾಂತಕನಾಗುತ್ತಾನೆ.

ವಿಷ್ಟಿಯಲ್ಲಿ ಹುಟ್ಟಿದರೆ ದರಿದ್ರವು. ಗುಳಿಕವಲ್ಲಿ ಅಂಗವಿಕಾರವು. ಯವ ಕಂಟಕವಲ್ಲಿ ಪಂಗುವು. ರಿಕ್ತೆಯಲ್ಲಿ ನಪುಂಸಕನು. ವ್ಯತೀಪಾತದಲ್ಲಿ ಅಂಗಹಾನಿ. ಪರಿಘದಲ್ಲಿ ಮರಣ. ವೈಧೃತಿ ಪಿತೃಹಾನಿ, ನಷ್ಟ. ಚಂದ್ರನಲ್ಲಿ ಅಂಧಕನು. ಶೂಲ ದಲ್ಲಿ ಸರ್ವನಾಶ. ಅಂಧನಕ್ಷತ್ರದಲ್ಲಿ ಕುಲನಾಶ. ವಿಪರೀತ ಪ್ರಸವದಲ್ಲೂ ನಾಭಿ ನಾಳದಿಂದ ಸುತ್ತಿಕೊಂಡು ಹುಟ್ಟಿದರೂ ದೇಶಕ್ಕೆ ಅರಸಿಗೆ ತನಗೆ ಸಹಾ ನಾಶವು. ಎರಡು ಸಂಧ್ಯಾ ವೇಳೆಯಲ್ಲೂ ಅಧಿಕಾಂಗವು ಹೀನಾಂಗವು. ಹಿಂದೆ ಹೇಳಿದ ಎಲ್ಲಾ ಯೋಗವಲ್ಲಿ ಹುಟ್ಟಿದರೆ ಎಲ್ಲಾ ಭಯವೂ ಉಂಟಾಗುವುದು. ಕಾಲು ಮುಂದಾಗಿ ಹುಟ್ಟಿದರೂ ಹಿಂದೆ ಹೇಳಿದ ಫಲವೇ. ಇದಕ್ಕೆ ಶಾಂತಿ ಮಾಡಬೇಕು.

ಸೂರ್ಯಾದಿ ಏಳು ಗ್ರಹಗಳು ಕ್ರಮವಾಗಿ ತಂದೆ ತಾಯಿ ಸಹೋದರ ಸೋದರ ಮಾವ ತಾಯಿಯ ತಂದೆ ತಂದೆಯ ತಂದೆ ಮಗ ಇವರುಗಳಿಗೆ ಒಂದೊಂದು ಗ್ರಹವು ಲಗ್ನಕ್ಕೆ ಪಂಚಮ ನವಮದಲ್ಲಿರುವ ಗ್ರಹಗಳು ಯಾವ ಸಂಜ್ಞೆಯಾಗುತ್ತೋ ಅವರನ್ನು ಕೊಲ್ಲುವರು.

ಲಗ್ನಕ್ಕೆ ೧೨ ರಲ್ಲಿ ಶನಿ-ರವಿಯಿದ್ದು ೭ ರಲ್ಲಿ ಕ್ಷೀಣ ಚಂದ್ರನಿದ್ದರೆ ತಂದೆಗೆ ಮರಣ. ಶುಭದೃಷ್ಟಿಯಿದ್ದರೆ ೩ ವರುಷ ಬದುಕುವನು. ಲಗ್ನಕ್ಕೆ ದಶಮದಲ್ಲಿ ಶನಿ ಯಿದ್ದರೆ ಶಿಶುವಿಗೆ, ರವಿಯಿದ್ದರೆ ತಂದೆಗೆ ಚಂದ್ರನಿದ್ದರೆ ತಾಯಿಗೆ ನಾಶವು. ಲಗ್ನ ಅಥವಾ ಚಂದ್ರ ಇವರಿಗೆ ೩ ನೇ ಕಡೆ ಪಾಪಗ್ರಹವಿದ್ದರೆ ಸಹೋದರ ನಾಶ. ಕ್ರೂರ ಗ್ರಹ ನೋಡಿದರೆ ಸದ್ಯೋಮರಣ. ಶುಭಗ್ರಹ ನೋಡಿದರೆ ಎಂಟು ವರುಷ ಬದುಕು ತ್ತಾನೆ. ಇದೇ ಮೇರೆ ಎಲ್ಲಾ ಭಾವಗಳಿಗೂ ನೋಡಿಕೊಳ್ಳಬೇಕು. ದಿವಾಜಾತನಿಗೆ ಪಿತೃವ್ಯ ಗ್ರಹ ಶನಿ, ರಾತ್ರಿ ಜಾತಕನಿಗೆ ಪಿತೃವ್ಯಗ್ರಹ ರವಿ. ಈ ಎರಡು ಪಾಪಗ್ರಹ ಯುಕ್ತವಾದರೆ ಪಿತೃವ್ಯ ನಾಶವು. ಇದೇ ಪ್ರಕಾರ ಹಗಲು ಚಂದ್ರನು ಮಾತೃಷ್ವಸೃ-ರಾತ್ರಿ ಶುಕ್ರನು ಮಾತೃಷ್ವಸೃ-ಇವರು ಪಾಪಯುಕ್ತರಾದರೆ ಅವರಿಗೆ ನಾಶವು. ಜನನ ಕಾಲವಲ್ಲಿ ೬-೭-೮-೧೨-೧ ಇವುಗಳಲ್ಲಿ ಪಾಪಗ್ರಹಗಳಿದ್ದರೆ ಮಾತುಳನ ನಾಶವು. ೧ ರಲ್ಲಿ ಚಂದ್ರ ೪ ರಲ್ಲಿ ಪಾಪಗ್ರಹ ೭ ರಲ್ಲಿ ಶುಕ್ರರಿದ್ದರೆ ಹುಟ್ಟಿದವನು ತನ್ನ ಕುಲವನ್ನೇ ಕೆಡಿಸುವನು.

ಅರಿಷ್ಟಕಾರಕಗ್ರಹ ರವಿಯಾದರೆ ೬ ತಿಂಗಳು, ಚಂದ್ರನಾದರೆ ೨ ಘಳಿಗೆ, ಕುಜ ನಾದರೆ ೧ ರಾತ್ರಿ, ಬುಧನಾದರೆ ೨ ತಿಂಗಳು, ಗುರುವಾದರೆ ೧ ತಿಂಗಳು, ಶುಕ್ರನಾದರೆ ೧ ಪಕ್ಷ, ಶನಿಯಾದರೆ ೧ ವರುಷ, ಈ ಕಾಲಗಳಲ್ಲಿ ತಮ್ಮ ಫಲವನ್ನು ಕೊಡುತ್ತಾರೆ. ಅರಿಷ್ಟಕಾರಕ ಗ್ರಹವು ಲಗ್ನಾದಿಯಾಗಿ ತಾನು ಇರುವ ರಾಶಿ ಸಂಖ್ಯಾ ವರುಷಗಳಲ್ಲಾಗಲೀ, ಮಾಸವಲ್ಲಾಗಲೀ, ದಿವಸವಲ್ಲಾಗಲೀ ಹಿಂದೆ ಹೇಳಿದ ಮೇರೆ ರವ್ಯಾದಿ ಗ್ರಹಗಳ ಕಾಲವಲ್ಲಾಗಲೀ ಫಲ ಕೊಡುವರು. ಅರಿಷ್ಟಕಾರಕ ಗ್ರಹವ ತೀವ್ರ ಮೃದುತ್ವವನ್ನು ತಿಳಿದು ಅರಿಷ್ಟ ಕಾಲವನ್ನು ಸ್ವಲ್ಪವಾಗಿಯಾಗಲೀ ಹೆಚ್ಚಾಗಿಯಾಗಲೀ ಊಹಿಸಬೇಕು.

ಈ ಯೋಗಗಳಿಗೆ ಈ ಕೆಳಗೆ ವಿವರಿಸುವ ಅರಿಷ್ಟಾಪವಾದಗಳ ಗುರುತುಗಳಿದ್ದರೆ
ಕನು ಬದುಕುತ್ತಾನೆ.

ಎಲ್ಲಾ ಗ್ರಹಗಳೂ ಪೂರ್ಣ ಚಂದ್ರನನ್ನು ನೋಡಿದರೆ ಅರಿಷ್ಟ ನಾಶವು.
ನು ಅತ್ಯುಚ್ಚಭಾಗದಲ್ಲೂ ಮಿತ್ರಾಂಶೆಯಲ್ಲಾದರೂ ಇದ್ದರೆ ಅರಿಷ್ಟವನ್ನು
ವನು. ಚಂದ್ರನಿಗೆ ೬-೭-೮ರಲ್ಲಿ ಪಾಪಸಂಬಂಧವಿಲ್ಲದ ಶುಭಗ್ರಹವಿದ್ದರೆ
ನಾಶವು. ಚಂದ್ರನಿಗೆ ಶುಭದೃಷ್ಟಿ ಶುಭದ್ರೇಕ್ಕಾಣ ಆದರೆ ಅರಿಷ್ಟನಾಶವು.
ಗ್ರಹಸ್ಥಾನದಲ್ಲಿರುವ ಚಂದ್ರನು ಲಗ್ನಾಧಿಪತಿಯಿಂದ ನೋಡಿದರೆ ಅರಿಷ್ಟ ನಾಶವು.
ಗ್ರಹಸ್ಥಾನದಲ್ಲಿ ಚಂದ್ರನಿದ್ದು ಲಗ್ನಾಧಿಪತಿ ಮಾತ್ರ ನೋಡಲ್ಪಟ್ಟರೆ ಅರಿಷ್ಟ
ವು. ಲಗ್ನಾಧಿಪತಿಯು ಶುಭಮಿತ್ರರಿಂದ ನೋಡಿದರೆ ಚಂದ್ರಾರಿಷ್ಟ ನಾಶವು.
ಧಿಪತಿಯು ಚಂದ್ರನು ೩-೬-೧೦-೧೧ ರಲ್ಲಿ ಇದ್ದರೆ ಚಂದ್ರಾರಿಷ್ಟ ನಾಶವು.
ಲಗ್ನಕ್ಕೆ ೧೨ ರಲ್ಲಿ ಬುಧ, ಶುಕ್ರ, ೧೧ರಲ್ಲಿ ಪಾಪಗ್ರಹ ೧೦ರಲ್ಲಿ ಗುರುವಿದ್ದರೆ
ನಾಶವು.

೬-೮ ರಲ್ಲಿರುವ ಚಂದ್ರನು ಕೃಷ್ಣಪಕ್ಷದಲ್ಲಿ ಹಗಲೂ, ಶುಕ್ಲಪಕ್ಷದಲ್ಲಿ ರಾತ್ರಿ
ದವನು ಅರಿಷ್ಟವನ್ನು ಕೆಡಿಸುವನು. ಉಚ್ಚ ಸ್ವಕ್ಷೇತ್ರ ಮಿತ್ರಕ್ಷೇತ್ರದಲ್ಲಿರುವ
ಚಂದ್ರನನ್ನು ಶುಭಮಿತ್ರರು ನೋಡಿ ಶತ್ರುಪಾಪರೂ ನೋಡದೆ ಇದ್ದರೆ ಸಮಸ್ತ
ನಾಶವು. ವೃಷಭ ಕರ್ಕಾಟಕದಲ್ಲಿ ಪೂರ್ಣಚಂದ್ರನಿದ್ದು ರವಿ, ಕುಜ, ಶನಿ
ದೇ ಇದ್ದು ಗುರು ಶುಕ್ರರು ಮಾತ್ರ ನೋಡಿ ಲಗ್ನಕ್ಕೆ ಪಂಚಮವಾದರೆ ತಾಯಿಗೆ
ವು. ರವಿ ೫ರಲ್ಲಿದ್ದರೆ ತಂದೆಗೆ ಸುಖವು. ಅಸ್ತಂಗತನಲ್ಲದ ಗುರುವು ಲಗ್ನ
ದ್ದರೆ ಸಮಸ್ತ ಅರಿಷ್ಟವನ್ನೂ ಕೆಡಿಸುವನು. ಸೌಮ್ಯದ ಗ್ರಹ ಒಂದಾದರೂ ಬಲಿ
ಗಿ ಕೇಂದ್ರ ತ್ರಿಕೋಣದಲ್ಲಿದ್ದರೆ ಸಮಸ್ತ ದೋಷ ನಾಶವು. ಪಾಪಗ್ರಹಗಳು
ಷಡ್ವರ್ಗದಲ್ಲಿದ್ದು ಶುಭಗ್ರಹಗಳಿಂದ ನೋಡಲ್ಪಡದೆ ಇದ್ದರೂ ಅರಿಷ್ಟನಾಶವು.
ಾದಿ ಮಹಾ ಯೋಗಗಳು ಇದ್ದರೆ ಅರಿಷ್ಟನಾಶವು. ಕೇತುವಿನ ದೋಷವನ್ನು
ಕೆಡಿಸುತ್ತಾನೆ. ಈ ಎರಡು ಗ್ರಹಗಳ ದೋಷವನ್ನು ಶನಿಯು, ಈ ೩ ದೋಷ
ಕುಜನು, ಈ ೪ ದೋಷವನ್ನು ಬುಧನು, ಈ ೫ ದೋಷವನ್ನು ರವಿಯು ಈ ೬
ಷವನ್ನು ಚಂದ್ರನು ಈ ೭ ದೋಷವನ್ನು ಶುಕ್ರನು, ಈ ೮ ದೋಷವನ್ನು ಗುರುವು
ತ್ತಾನೆ. ಸ್ವಕ್ಷೇತ್ರ ಉಚ್ಚ ಮಿತ್ರಕ್ಷೇತ್ರ ಲಗ್ನ ಕೇಂದ್ರ ತ್ರಿಕೋಣಗಳಲ್ಲಿರುವ
ವು ಸಮಸ್ತ ಅರಿಷ್ಟಗಳನ್ನೂ ನಾಶಮಾಡುತ್ತಾನೆ. ಶುಭರಾಶಿಗಳು ಲಗ್ನವಾದರೆ
ನಾಶವು. ಬಲವಾದ ಸೌಮ್ಯಗ್ರಹದಿಂದಲೂ ಬಲವಿಲ್ಲದ ಪಾಪಗ್ರಹದಿಂದಲೂ
ಡಲ್ಪಡುವ ಶುಭಗ್ರಹರಾಶಿಯು ಲಗ್ನವಾದರೆ ಸಮಸ್ತ ಅರಿಷ್ಟನಾಶವು. ಎಲ್ಲಾ
ಗಳೂ ಸ್ವಕ್ಷೇತ್ರದಲ್ಲಿದ್ದರೆ ಸಮಸ್ತ ಅರಿಷ್ಟನಾಶವು, ಕೇಂದ್ರದಲ್ಲಿ ಶುಕ್ರ ಗುರುಗಳು
ರೆ ಪೂರ್ಣಾಯುರ್ಯೋಗವು. ೧-೪-೭-೧೦-೫-೯ರಲ್ಲಿ ಪಾಪರಿಲ್ಲದಿದ್ದರೆ
ಾಯುರ್ಯೋಗವು. ಸಮಸ್ತ ಅರಿಷ್ಟವು ದೇವ ದ್ವಿಜರುಗಳಿಗೆ ಧನಧಾನ್ಯ ಗೋ

ಭೂಮಿ ಹಿರಣ್ಯ ದಾನಗಳನ್ನೂ ತೀರ್ಥಾಭಿಷೇಕ ಗ್ರಹಶಾಂತಿ ಯಂತ್ರ ರಕ್ಷೆ ಜಪ ಇ
ಗಳನ್ನೂ ಮಾಡುವುದ್ದರಿಂದ ಅರಿಷ್ಟ ನಾಶವನ್ನು ಹೊಂದುವರು.

ಎಂಟು ವರುಷದ ನಂತರ ೩೨ ವರುಷಗಳೊಳಗೆ ಸಾಯುವವರಿಗೆ ಅಲ್ಪಾಯು ಯೋಗವೆಂದು ಹೆಸರು. ೩೨ ವರುಷದ ನಂತರ ೭೦ ವರುಷದೊಳಗೆ ಸಾಯುವವರಿ ಮಧ್ಯಾಯುಯೋಗವೆಂತಲೂ, ೭೦ರ ನಂತರ ೧೨೦ರ ಒಳಗೆ ದೀರ್ಘಾಯು ಯೋಗವೆಂತಲೂ ಹೆಸರು.

## ರವ್ಯಾದಿ ಗ್ರಹಗಳ ಮಹಾದಶಾಭಾಗ ಕ್ರಮವು

ಜನ್ಮ ನಕ್ಷತ್ರದಲ್ಲಿ ಜನನ ಕಾಲದವರಿವಿಗೂ ಕಳೆದುಹೋದ ಘಳಿಗೆಗಳನ್ನು ಬಿಟ್ಟು ನಿಂತ ನಕ್ಷತ್ರ ಘಳಿಗೆಗಳನ್ನು ಆ ನಕ್ಷತ್ರಕ್ಕೆ ಪ್ರಾಪ್ತವಾದ ದೆಶೆಯಿಂದ ಗುಣಿಸಿ ಆ ಲಬ್ಧವನ್ನು ೬೦ ರಿಂದ ಭಾಗಿಸಲು ಬಂದ ಲಬ್ಧ ಆ ದೆಶೆಯಲ್ಲಿ ನಿಂತ ಸಂವತ್ಸರ ಗಳೆಂಬದಾಗಿಯೂ ಅದರೊಳು ನಿಂತ ಶೇಷವನ್ನು ೧೨ ರಿಂದ ಗುಣಿಸಿ ೬೦ ರಿಂದ ಭಾಗಿಸಲು ಬಂದ ಲಬ್ಧವೇ ಮಾಸಗಳೆಂಬುದಾಗಿಯೂ ನಿಂತ ಶೇಷವನ್ನು ೩೦ ರಿಂದ ಗುಣಿಸಿ ೬೦ ರಿಂದ ಭಾಗಿಸಲು ಬಂದ ಲಬ್ಧವೇ ದಿನಗಳೆಂತಲೂ ನಿಂತ ಶೇಷವನ್ನು ೬೦ ರಿಂದ ಗುಣಿಸಿ ೬೦ ರಿಂದ ಭಾಗಿಸಲು ಬಂದ ಲಬ್ಧವೇ ಘಳಿಗೆಗಳೆಂತಲೂ ಈ ರೀತಿ ದಶಾಯೇಷ್ಯ ಸಂವತ್ಸರಗಳನ್ನು ತಿಳಿಯಬೇಕು.

# ಉದಾಹರಣೆ

ಮೂಲ ನಕ್ಷತ್ರ ಆದ್ಯಂತ ಘಳಿಗೆ ೬೫-೨೧ ಕ್ಕೆ ಜನನ ಕಾಲಕ್ಕೆ ಕಳೆದು ವುದು ೨೪-೨೫ ಘಳಿಗೆ ಹೋಗಲಾಗಿ ನಿಂತದ್ದು.

೪೦-೫೬ × ೭ ಕೇತುದಶಾ

೬೦)೩೯೨(೬

೩೬೦

೩೨

೨೮೦-೦

೬-೩೨

| ವರ್ಷ | ತಿಂಗಳು | ದಿನ |
|---|---|---|
| ೮೬-೩೨(೪- | ೯ | ೨೨ ಕೇತುದಶಾಯೋಪ್ಯ |

೪೦

೬ × ೧೨

೭೨

೩೨

೬೦)೫೮೪(೯

೫೪೦

೪೪ × ೩೦

೬೦)೧೩೨೦(೨೨

೧೨೦

೧೨೦

೧೨೦

........

ಇದರಂತೆ ನೋಡಿಕೊಳ್ಳಬೇಕು.

# ಷಡ್ವರ್ಗಕ್ರಮ

೧ ಲಗ್ನ, ೨ ಹೋರಾ, ೩ ದ್ರೇಕ್ಕಾಣ, ೪ ನವಾಂಶ, ೫ ದ್ವಾದಶಾಂ
೬ ತ್ರಿಂಶಾಂಶ ಇವುಗಳಿಗೆ ಷಡ್ವರ್ಗಗಳೆಂದು ಹೆಸರು.

ಲಗ್ನ-ಹೋರಾದ್ರೇಕ್ಕಾಣ-ನವಾಂಶ-ದ್ವಾದಶಾಂಶಗಳನ್ನು ತಿಳಿಯು ವ
ಹೇಗೆಂಬುದನ್ನು ೧ ನೇ ಭಾಗದಲ್ಲಿ ತಿಳಿಸಿರುವುದ್ದರಿಂದ ಇಲ್ಲಿಯೂ ಕೂಡ ತಿಳಿಸುವು
ಆವಶ್ಯಕ ಕಂಡುಬರಲಿಲ್ಲ. ತಿಳಿಸದೆ ಇರುವ ಭಾಗವಾದ ತ್ರಿಂಶಾಂಶವನ್ನು ಮಾತ್ರ
ಕೆಳಗೆ ವಿವರಿಸಿರುತ್ತೆ.

ತ್ರಿಂಶಾಂಶವೆಂದರೆ ಲಗ್ನವನ್ನು ೩೦ ಸಮಭಾಗ ಮಾಡುವದು, ಇದರಲ್ಲಿ ಬೆ
ರಾಶಿಗಳ ಕುಜನು ೫, ಶನಿ ೫, ಗುರು ೮, ಬುಧ ೯, ಶುಕ್ರ ೫, ಭಾಗಗಳಿಗೂ ಸ
ರಾಶಿಗಳಲ್ಲಿ ಶುಕ್ರ೫, ಬುಧ ೭, ಗುರು ೮, ಶನಿ ೫, ಭಾಗಗಳಿಗೂ ಕ್ರಮವಾಗಿ ಅಧಿಪ
ಗಳಾಗುವರು ಎಂದು ತಿಳಿಯಬೇಕು.

---

# ಲಗ್ನಕಾಲಗಳ ಕೋಷ್ಟದ ಪಟ್ಟಿ

೬೦ ವಿಘಳಿಗೆ-೧ ಘಳಿಗೆ

೧ ಸೆಕೆಂಡಿಗೆ ೨॥ ಕಲೆ
೬೦ ಸೆಕೆಂಡಿಗೆ ೧ ಮಿನೀಟು
೧ ಮಿನೀಟಿಗೆ ೨॥ ವಿಘಳಿಗೆ
೬೦ ಮಿನೀಟಿಗೆ ೧ ಘಂಟೆ ಅಥವಾ ೨॥ ಘಳಿಗೆ

೬೦ ಘಳಿಗೆಗೆ-೧ ದಿನ

೬೦ ಮಿನೀಟಿಗೆ ೧ ಘಂಟೆ
೨೪ ಘಂಟೆಗೆ ೧ ದಿನ ಅಂದರೆ ೬೦ ಘಳಿಗೆ
೬೦ ಘಳಿಗೆಗೆ ೧೨ ಲಗ್ನ

೩೦ ದಿನಗಳಿಗೆ ೧ ತಿಂಗಳು

೧ ತಿಂಗಳಿಗೆ ೨ ಪಕ್ಷ

೧೨ ತಿಂಗಳಿಗೆ ೧ ಸಂವತ್ಸರ

೧ ಸಂವತ್ಸರಕ್ಕೆ ೬ ಋತುಗಳು

---

# ಕೋಷ್ಟಗಳು

ಒಂದು ದಿನದಲ್ಲಿ ಬರುವ ೧೨ ಲಗ್ನಗಳಿಗೂ

ಇಂಗ್ಲೀಷ್ ಘಂಟೆ ಮಿನೀಟುಗಳ ವಿವರ

| | | | | | | | |
|---|---|---|---|---|---|---|---|
| ಷಲಗ್ನ ೪ ಘಳಿಗೆ ೧ ಘಂಟೆ ೩೬ ನಿಮಿಷ. | | | | ತುಲಾ ೫। ಘಳಿಗೆಗೆ ೨ ಘಂಟೆ ೬ ನಿಮಿಷ. | | | |
| ಷಭ | ೪॥ ಗೆ | ೧ | ೪೮ | ವೃಶ್ಚಿಕ | ೫॥ ಗೆ | ೨ | ೧೨ |
| ಥುನಾ | ೫। ಗೆ | ೨ | ೬ | ಧನಸ್ಸು | ೫॥ ಗೆ | ೨ | ೧೨ |
| ಕ | ೫॥ ಗೆ | ೨ | ೧೨ | ಮಕರ | ೫। ಗೆ | ೨ | ೬ |
| ಹ | ೫॥ ಗೆ | ೨ | ೧೨ | ಕುಂಭ | ೪॥ ಗೆ | ೧ | ೪೮ |
| | ೫। ಗೆ | ೨ | ೬ | ಮೀನಾ | ೪ ಕ್ಕೆ | ೧ | ೩೬ |

---

ಕಾಲಾಮೃತಾನುಸಾರೇಣ ಷಡ್ವರ್ಗ ಶೋಧನಾ ಪಟ್ಟಿ

| ವರ್ಗ | ಕಾಲಾಮೃತಾನುಸಾ |
|---|---|
| ೧ ಮೇಷ | ಅಧಿಪತಿ ಅಂಗಾರಕ-ಚರಲಗ್ನ-ಕ್ರೂರರಾಶಿ ಪುರುಷ-ರಾತ್ರಿ ಬ ಪೃಷ್ಠೋದಯ - ರವಿ ಉಚ್ಚ - ಶನಿ ನೀಚ - ಅಂಗಾರಕನಿಗೆ ಮೂ ತ್ರಿಕೋಣ, ಬೇರೆ ರಾಶಿ ಕೆಂಪು ವರ್ಣ. |
| ೨ ವೃಷಭ | ಅಧಿಪತಿ ಶುಕ್ರ - ಸ್ಥಿರ ಲಗ್ನ - ಸೌಮ್ಯ ರಾಶಿ - ಸ್ತ್ರೀ -ರಾತ್ರಿಬ ಪೃಷ್ಠೋದಯ - ಸಮರಾಶಿ - ರಾಹು ಉಚ್ಚ - ಕೇತು ನೀಚ - ಚಂ ನಿಗೆ ಮೂಲ ತ್ರಿಕೋಣ-ಶ್ವೇತ ವರ್ಣ-ಷಡ್ವರ್ಗಶುದ್ಧಿ |
| ೩ ಮಿಥುನ | ಅಧಿಪತಿ ಬುಧ-ದ್ವಿಸ್ವಭಾವ ಲಗ್ನ -ಕ್ರೂರ — ಪುರುಷ — ಬೇಸಿ ರಾ ರಾತ್ರಿ ಬಲ-ಶಿರ್ಷೋದಯ - ಎಲೆ ಹಸಿರು ಬಣ್ಣ - ೨ನೇ ಭಾಗ ಲಗ್ ತ್ಯಾಜ್ಯ-ಗೃಧ್ರದ್ರೇಕ್ಕಾಣ-ಆರುವರ್ಗ ಶುದ್ಧಿ-ರಾಹು ಬಲಿ. |
| ೪ ಕಟಕ | ಅಧಿಪತಿ ಚಂದ್ರ-ಚರ-ಗುರು ಉಚ್ಚ-ಕುಜ ನೀಚ - ರಾಹು ಬಲಿಷ್ಠ ಸ್ತ್ರೀ ಸೌಮ್ಯ-ರಾತ್ರಿ ಬಲ - ಪೃಷ್ಠೋದಯ - ಕೆಂಪು ಬಿಳುಪು ಸೇರಿದ ಬಣ್ಣ ೩ನೇ ಭಾಗ ಲಗ್ನ ತ್ಯಾಜ್ಯ - ವರಾಹ ದ್ರೇಕ್ಕಾಣ ವ್ಯವಹಾರ ಚಿಂತೆ |
| ೫ ಸಿಂಹ | ಅಧಿಪತಿ ರವಿ - ಸ್ಥಿರ - ಕ್ರೂರ - ಪುರುಷ-ದಿನಬಲ -ಶೀರ್ಷೋದಯ ಬೇಸಿರಾಶಿ - ಮೋಗಬಣ್ಣ - ರವಿಗೆ ಮೂಲ ತ್ರಿಕೋಣ ೨ನೇ ಭಾಗ ಲಗ್ನ ತ್ಯಾಜ್ಯ - ಗೃಧ್ರದ್ರೇಕ್ಕಾಣ - ರಾಜಕಾರ್ಯ ಚಿಂತೆ. |
| ೬ ಕನ್ಯಾ | ಅಧಿಪತಿ ಬುಧ - ದ್ವಿಸ್ವಭಾವ -ಸೌಮ್ಯ - ಸ್ತ್ರೀ ದಿನಬಲ - ಶಿರ್ಷೋದಯ - ಸಮರಾಶಿ-ಬುಧನಿಗೆ ಉಚ್ಚ ಮೂಲ ತ್ರಿಕೋಣ-ಶುಕ್ರನಿಗೆ ನೀಚ -೧ನೇ ಭಾಗ ಲಗ್ನ ತ್ಯಾಜ್ಯ - ಭುಜಂಗ ದ್ರೇಕ್ಕಾಣ - ಕನ್ಯಾದಿ ಚಿಂತೆ |
| ೭ ತುಲಾ | ಅಧಿಪತಿ ಶುಕ್ರ - ಚರಲಗ್ನ ಕ್ರೂರ - ಪುರುಷ - ದಿನಬಲ-ಶಿರ್ಷೋದಯ-ಬೇಸಿರಾಶಿ ಶುಕ್ರನಿಗೆ ಮೂಲ ತ್ರಿಕೋಣ-ಶನಿ ಉಚ್ಚ-ರವಿ ನೀಚ-ನೀಲಿ ಬಣ್ಣ-೨ನೇ ಭಾಗ ತ್ಯಾಜ್ಯ - ಗೃಧ್ರ ದ್ರೇಕ್ಕಾಣ -ಆಭರಣ ಚಿಂತೆ. |
| ೮ ವೃಶ್ಚಿಕ | ಅಧಿಪತಿ ಕುಜ-ಸ್ಥಿರಲಗ್ನ - ಸ್ಥಿರ ಸೌಮ್ಯ-ಸ್ತ್ರೀ -ದಿನಬಲ-ಶಿರ್ಷೋದಯ - ಸಮರಾಶಿ-ಬಂಗಾರ ಬಣ್ಣ - ಚಂದ್ರ ನೀಚ - ೩ನೇ ಭಾಗ ಲಗ್ನ ತ್ಯಾಜ್ಯ - ವರಾಹ ದ್ರೇಕ್ಕಾಣ - ರೋಗ ಚಿಂತೆ |
| ೯ ಧನಸ್ಸು | ಅಧಿಪತಿ ಗುರು ದ್ವಿಸ್ವಭಾವ-ಕ್ರೂರ-ಪುರುಷ - ರಾತ್ರಿ ಬಲ - ಪೃಷ್ಠೋದಯ - ಬೇಸಿರಾಶಿ - ಬಿಳುಪು ಹಳದಿ ಬಣ್ಣ-ಗುರುವಿಗೆ ಮೂಲ ತ್ರಿಕೋಣ -೧ನೇ ಭಾಗ ಲಗ್ನ ತ್ಯಾಜ್ಯ - ಭುಜಂಗ ದ್ರೇಕ್ಕಾಣ - ಧನ ಚಿಂತೆ |
| ೧೦ ಮಕರ | ಅಧಿಪತಿ ಶನಿ - ಚರಲಗ್ನ ಸೌಮ್ಯ-ಸ್ತ್ರೀ ರಾತ್ರಿ ಬಲ- ಪೃಷ್ಠೋದಯ -ಸಮರಾಶಿ -ಬಿಳುಪು ಕೆಂಪು ಸೇರಿದ ವರ್ಣ - ಗುರು ನೀಚ ಕುಜ ಉಚ್ಚ ೩ನೇಭಾಗ ಲಗ್ನ ತ್ಯಾಜ್ಯ-ವರಾಹ ದ್ರೇಕ್ಕಾಣ - ಕೆಲಹ ಚಿಂತೆ. |
| ೧೧ ಕುಂಭ | ಅಧಿಪತಿ ಶನಿ ಸ್ಥಿರಲಗ್ನ - ಬೇಸಿರಾಶಿ - ಕ್ರೂರ - ಪುರುಷ ದಿನಬಲ-ಪೃಷ್ಠೋದಯ ಶನಿಗೆ ಮೂಲ ತ್ರಿಕೋಣ ಕಪ್ಪು ಬಿಳುಪು ಸೇರಿದ ಬಣ್ಣ ೨ನೇ ಭಾಗ ಲಗ್ನ ತ್ಯಾಜ್ಯ - ಗೃಧ್ರದ್ರೇಕ್ಕಾಣ-ಸ್ಥಾನ ಚಿಂತೆ. |
| ೧೨ ಮೀನ | ಅಧಿಪತಿ ಗುರು - ದ್ವಿಸ್ವಭಾವ - ಸೌಮ್ಯ ಸ್ತ್ರೀಸಮ-ಪೃಷ್ಠೋದಯ -ಬಿಳುಪು ವರ್ಣ-ಶುಕ್ರ ಉಚ್ಚ - ಬುಧ ನೀಚ-೩ನೇ ಭಾಗ ಲಗ್ನ ತ್ಯಾಜ್ಯ - ವರಾಹ ದ್ರೇಕ್ಕಾಣ, ನಿರ್ಗಮನ ಚಿಂತೆ |

## ಲಗ್ನಗಳಿಗೂ ಶೋಧನಾ ಪಟ್ಟಿ

— ಸ್ತ್ರೀ ಪು— ಘಳಿಗೆ ವಿಘಳಿಗೆ ಪುಷ್ಕರ ಭಾಗ—
೨ ೪ ಭರಣಿ ೪ ಕೃ ೧ ಪಂಚವರ್ಗಶುದ್ಧಿ ೪ ೨೪೦ ೧೬೮ ೨೧ನೇ
೨೪ ೩೦ ತ್ಯಾಜ್ಯಗಳಿಗೆ ಧಾತುಚಿಂತಾ ೧ನೇ ಭಾಗ ಭುಜಂಗತ್ಯಾ
ರೋ ೪ ಮೃ ೨ ಘಳಿಗೆ ೪॥ ವಿಘಳಿಗೆ ೨೭೦ ಪುಷ್ಕರ ೧೨೫ ಭಾಗ ೧೪ನೇ
೪೦ ೧೪ ೧ನೇ ಭಾಗ ತ್ಯಾಜ್ಯ ಲಗ್ನ ಭುಜಂಗ ದ್ರೇಕ್ಕಾಣ ಮೂಲ
ಆರು ವರ್ಗ ಶುದ್ಧಿ.

ೀ ನ ಘಳಿಗೆ ವಿಘಳಿಗೆ ಪುಷ್ಕರ ಭಾಗ
೨ ಆರ್ದ್ರ ೪ ಪುನರ್ವಸು ೩ ೫। ೩೧೫ ೨೪೦ ೨೪ ನೇ
ಜೀವಚಿಂತಾ

— ಸ್ತ್ರೀ ಘಳಿಗೆ ವಿಘಳಿಗೆ ಪುಷ್ಕರ ಭಾಗ
೧ ಪುಷ್ಯ ೪ ಆಶ್ಲೇಷ ೪ ೫॥ ೩೩೦—೬೮ ೭ನೇ
೩೨ ಷಡ್ವರ್ಗ ಶುದ್ಧಿ

ಸ್ತ್ರೀ ಸ್ತ್ರೀ ಘಳಿಗೆ ವಿಘಳಿಗೆ ಪುಷ್ಕರ ಭಾಗ
೩ ೪ ಪುಬ್ಬ ೪ ಉತ್ತರ ೧ ೫॥ ೩೩೦ ೨೩೧ ೨೧ನೇ
೦ ೨೦ ೧೮ ನಾಲ್ಕು ವರ್ಗಶುದ್ಧಿ ೪

ಸ್ತ್ರೀ ಘಳಿಗೆ ವಿಘಳಿಗೆ ಪುಷ್ಕರ ಭಾಗ
ರ ೪ ಹಸ್ತ ೪ ಚಿತ್ತ ೨ ೩। ೩೧೫ ೧೪೪ ೧೪ನೇ
೧ ೨೦ ಆರು ವರ್ಗಶುದ್ಧಿ

ಸ್ತ್ರೀ ಘಳಿಗೆ ವಿಘಳಿಗೆ ಪುಷ್ಕರ ಭಾಗ
೨ ಸ್ವಾತಿ ೪ ವಿಶಾಖ ೩ ೫। ೩೧೫-೫೬ ೨೮ನೇ
೧೪ ಆರು ವರ್ಗಶುದ್ಧಿ

ಪುಂ ಪುಂ ವಿಘಳಿಗೆ ಪುಷ್ಕರ ಭಾಗ
ಖ೧ ಅನುರಾಧಾ೪ ಘಳಿಗೆ ಜ್ಯೇಷ್ಟ ೪ ೫ ೩೩೦ ೭೭ ೭ನೇ
(೪) ಆರು ವರ್ಗಶುದ್ಧಿ

ಸ್ತ್ರೀ ಸ್ತ್ರೀ ಘಳಿಗೆ ವಿಘಳಿಗೆ ಪುಷ್ಕರ ಭಾಗ
೨೮ ೪ ಪೂರ್ವಾಷಾಢ ೪ ಉತ್ತರ ೧ ೫॥ ೩೩೦ ೨೩೪ ೨೧ನೇ
—೫೬ ೨೪ ೨೦ (೬) ವರ್ಗಶುದ್ಧಿ

ಪುಂ ಸ್ತ್ರೀ ಘಳಿಗೆ ವಿಘಳಿಗೆ ಪುಷ್ಕರ ಭಾಗ
೩ ಶ್ರ ೪ ಧನಿಷ್ಟ ೨ ೫। ೩೧೫ ೧೪೫ ೧೪ನೇ
೨ ೧೦ ೧೦ ೫ ವರ್ಗಶುದ್ಧಿ

ನ ಪುಂ ಘಳಿಗೆ ವಿಘಳಿಗೆ ಪುಷ್ಕರ ಭಾಗ
ಶತಭಿಷ ೪ ಪೂಭಾದ್ರ ೩ ೪॥ ೨೭೦ ೨೩೫ ೨೪ನೇ
೧೮ ೧೬ ೫ ವರ್ಗಶುದ್ಧಿ

ಪುಂ ಸ್ತ್ರೀ ಘಳಿಗೆ ವಿಘಳಿಗೆ ಪುಷ್ಕರ ಭಾಗ
೨೧ ಉತ್ತಭಾ ೪ ರೇವತಿ ೪ ೪ ೨೪೦ ೫೬ ೭ನೇ
೨ ೨೪ ೩೦ ೬ ವರ್ಗಶುದ್ಧಿ

## ಕಾಲಾಮೃತಾನುಸಾರ ೧೨ ಲಗ್ನಗಳಿಗೂ ಶೋಧನಾ ಪಟ್ಟಿ

ಕಾಲಾಮೃತಾನುಸಾರವಾಗಿ ಪಟ್ಟಿಗೆ ಶೋಧನಾ ಪಟ್ಟಿ

| | | | | | | |
|---|---|---|---|---|---|---|
| ೧ | ಮೇಷ | ಓಜೇಕ್ಷೇಂದು | ಶೋಧಸತ್ತ್ವ ರಾಶಿಗಳಿಗೆ ಕ್ರಮ: | ರವಿ ೨ ಘಳಿಗೆ ೧೨೦ ವಿಘಳಿಗೆ | ಚಂದ್ರ ೨ ವಿಘಳಿಗೆ ೧೨೦ವಿಘಳಿಗೆ | ಒಟ್ಟು ೪ ಘ |
| ೨ | ವೃಷಭ | ಸಮೋಷ್ಣಿಂದು ದಿವಾಕರೌ | | ಚಂದ್ರ ೧೩೫ ಕ್ಕೆ ೨-೧೫ | ರವಿ ೧೩೫ಕ್ಕೆ ೨-೧೫ | ೪॥ |
| ೩ | ಮಿಥುನ | ಓಜೇಕ್ಷೇಂದು | | ರವಿ ೧೫೭॥ಗೆ ೨॥= | ಚಂದ್ರ ೧೫೭॥ಗೆ೨॥- | ೫। |
| ೪ | ಕರ್ಕಾಟಕ | ಸಮೋಷ್ಣಿಂದು ದಿವಾಕರೌ | | ಚಂದ್ರ೨॥ ಘಳಿಗೆ ೧೬೫ ವಿಘಳಿಗೆ | ರವಿ ೨॥। ೧೬೫ | ೫॥ |
| ೫ | ಸಿಂಹ | ಓಜೇಕ್ಷೇಂದು | | ರವಿ ೨॥। ಗೆ ೧೬೫ | ಚಂದ್ರ೨॥।ಗೆ ೧೬೫ | ೫॥ |
| ೬ | ಕನ್ಯ | ಸಮೋಷ್ಣಿಂದು ದಿವಾಕರೌ | | ಚಂದ್ರ ೨॥=ಗೆ ೧೫೭॥ವಿಘಳಿಗೆ | ರವಿ ೨॥=ಗೆ ೧೫೭॥ | ೫। |
| ೭ | ತುಲಾ | ಓಜೇಕ್ಷೇಂದು | | ರವಿ ೨।= ಗೆ ೧೫೦ | ಚಂದ್ರ ೨॥ಗೆ ೧೬೫ | ೫। |
| ೮ | ವೃಶ್ಚಿಕ | ಸಮೋಷ್ಣಿಂದು ದಿವಾಕರೌ | | ಚಂದ್ರ ೨॥ ।ಗೆ ೧೬೫ | ರವಿ ೨॥ । ಗೆ ೧೬೫ | ೫॥ |
| ೯ | ಧನಸ್ಸು | ಓಜೇಕ್ಷೇಂದು | | ರವಿ ೨॥ । ೧೬೫ | ಚಂದ್ರ ೨॥ ।ಗೆ ೧೬೫ | ೫॥ |
| ೧೦ | ಮಕರ | ಸಮೋಷ್ಣಿಂದು ದಿವಾಕರೌ | | ಚಂದ್ರ ೨॥=ಗೆ ೧೫೭ | ರವಿ ೨॥=ಗೆ ೧೫೭॥ | ೫॥ |
| ೧೧ | ಕುಂಭ | ಓಜೇಕ್ಷೇಂದು | | ರವಿ ೨। ಗೆ ೧೩೫ | ಚಂದ್ರ ೨ ।ಗೆ ೧೩೫ | ೪॥ |
| ೧೨ | ಮೀನ | ಸಮೋಷ್ಣಿಂದು ದಿವಾಕರೌ | | ಚಂದ್ರ ೨ ಕ್ಕೆ ೧೨೦ | ರವಿ ೨ ಕ್ಕೆ ೧೨೦ | ೪ |

## ಕಾಲಮೃತಾನುಸಾರ ೧೨ ಲಗ್ನಗಳಿಗೂ ದ್ರೇಕ್ಕಾಣ ಶೋಧನಾಪಟ್ಟಿ

| | | | | |
|---|---|---|---|---|
| ಚರೆಸ್ವಪು॥ನವಪಾಃ ಸ್ವ೧ ಪು ೫ ನರ್ಮ | ಕುಜ ವಿಘಳಿಗೆ ೮೦ ಕ್ಕೆ ೧ ಘಳಿಗೆ ೨೦ ವಿಘಳಿಗೆ | ರವಿ ೮೦ ಕ್ಕೆ ೧–೨೦ | ಗುರು ೮೦ ಕ್ಕೆ ೧–೨೦ | ಒಟ್ಟು ಘಳಿಗೆ ೪ |
| ಸ್ಥಿರೆ ರ್ಮ–ಸ್ವ೧. ಪುತ್ರ೫ | ಶನಿ–೯೦ ಕ್ಕೆ ೧–೩೦ | ಶುಕ್ರ–೯೦ ಕ್ಕೆ ೧–೩೦ | ಬುಧ ೯೦ ಕ್ಕೆ ೧-೩೦ | ೪॥ |
| ದ್ವಿಸ್ವಭಾವ ತ್ರ ೫-ಧರ್ಮ೧-ಸ್ವ೫ | ಶನಿ–೧೦೫ ಕ್ಕೆ ೧॥। | ಶನಿ ೧೦೫ ಕ್ಕೆ ೧॥। | ಬು–೧೦೫ ಕ್ಕೆ ೧ ॥। | ೫। |
| ಚರೆ ೧ಪು೫.ನವಪಾಃ೯ | ಚಂ–೧೫೦ ಕ್ಕೆ ೧೧೦ ವಿಘಳಿಗೆ | ಕು–೧-೫೧ ಕ್ಕೆ ೧೧೦ | ಗು–೧-೫೦ ಕ್ಕೆ ೧೧೦ | ೫। |
| ಸ್ಥಿರೆ ರ್ಮ-ಸ್ವ೧-ಪುತ್ರ೫ | ಕು–೧೫೦ ಕ್ಕೆ ೧೧೦ | ರವಿ ೧-೫೦ ಕ್ಕೆ ೧೧೦ | ಗು-೧-೫೦ಕ್ಕೆ ೧೧೦ | ೫॥ |
| ದ್ವಿಸ್ವಭಾವೆ ತ್ರ೫-ಧರ್ಮ೯-ಸ್ವ೧ | ಶನಿ೧॥ । ಗೆ ೧೦೫ | ಶು–೧॥ । ಗೆ ೧೦೫ | ಬುಧ–೧॥ ।ಗೆ ೧೦೫ | ೫! |
| ಚರಸ್ವಪುತ್ರ ನವಪಾಃ | ಶುಕ್ರ ೧॥ । ಗೆ ೧೦೫ | ಶನಿ ೧॥ ಗೆ ೧೦೫ | ಬುಧ–೧॥। ಗೆ ೧೦೫ | ೫। |
| ಸ್ಥಿರೆಧರ್ಮ ಸ್ವಪುತ್ರ | ಚಂ–೧–೫೦ ೧೧೦ | ಕುಜ ೧-೫೦ ೧೧೦ | ಗುರು ೧-೫೦ ೧೧೦ | ೫॥ |
| ದ್ವಿಸ್ವಭಾವೆ ಪುತ್ರಧರ್ಮಸ್ವಪಃ | ಕು–೧–೫೦ ೧೧೦ | ರವಿ ೧–೫೦ ೧೧೦ | ಗುರು ೧–೫೧ ೧೧೦ | ೫॥ |
| ಚರ ಸ್ವಪುತ್ರ ನವಪಾಃ | ಶನಿ ೧॥ । ಗೆ ೧೦೫ | ಶುಕ್ರ ೧॥ । ಗೆ ೧೦೫ | ಬುಧ ೧॥ । ಗೆ ೧೦೫ | ೫। |
| ಸ್ಥಿರೆಧರ್ಮ ಸ್ವಪುತ್ರಃ | ಶುಕ್ರ ೧॥ ಗೆ ೯೦ | ಶನಿ ೧॥ ಗೆ ೯೦ | ಬುಧ ೧॥ ಗೆ ೯೦ | ೪॥ |
| ದ್ವಿಸ್ವಭಾವೆ ತ್ರಧರ್ಮಸ್ವಪಃ | ಚಂ ೧–೨೦ಕ್ಕೆ ೮೦ | ಕು ೧-೨೦ ಕ್ಕೆ ೮೦ | ಗು ೧–೨೦ ಕ್ಕೆ ೮೦ | ೪ |

## ಕಾಲಾಮೃತಾನುಸಾರೇಣ ೧೨ ಲಗ್ನಗಳಿಗೂ ನವಾಂಶ ಶೋಧನಾ ಪಟ್ಟಿ

ಕಾಲಾಮೃತಾನುಸಾರ ಲಗ್ನಗಳ ಶೋಧನಾ ಪಟ್ಟಿ

| | | | | | | |
|---|---|---|---|---|---|---|
| ೧ | ಮೇಷ | ಅಜಾತ್ ಮೇಷಾದಿ | ಕುಜ-೨೬॥। ವಿಘಳಿಗೆ | ಶುಕ್ರ೨೬॥। | ಬುಧ-೨೯॥। | ಚಂದ್ರ ೩೬॥ |
| ೨ | ವೃಷಭ | ಮಗಾತ್ ಮಕರಾದಿ | ಶನಿ-೩೦ | ಶನಿ-೩೦ | ಗುರು-೩೦ | ಕುಜ-೩೦ |
| ೩ | ಮಿಥುನ | ತುಲಾತ್ ತುಲಾದಿ | ಶುಕ್ರ-೩೫ | ಕುಜ-೩೫ | ಗುರು-೩೫ | ಶನಿ-೩೫ |
| ೪ | ಕರ್ಕಾಟಕ | ಕಟಕಾತ್ ಕಟಕಾದಿ | ಚಂದ್ರ-೩೬॥। | ರವಿ-೩೬॥। | ಬುಧ-೩೬೦ | ಶು-೩೬॥ |
| ೫ | ಸಿಂಹ | ಮೇಷಾದಿ | ಕುಜ-೩೬ ॥ | ಶುಕ್ರ-೩೬ | ಬುಧ-೩೬೦ | ಚಂದ್ರ ೩೬॥ । |
| ೬ | ಕನ್ಯ | ಮಕರಾದಿ | ಶನಿ-೩೫ | ಶನಿ-೩೫ | ಗುರು-೩೫ | ಕುಜ-೩೫ |
| ೭ | ತುಲಾ | ತುಲಾದಿ | ಶುಕ್ರ-೩೫ | ಕುಜ-೩೫ | ಗುರು-೩೫ | ಶನಿ-೩೫ |
| ೮ | ವೃಶ್ಚಿಕ | ಕಟಕಾದಿ | ಚಂದ್ರ-೩೬॥ | ರವಿ-೩೬॥ | ಬು-೩೬ ॥ | ಶು-೩೬॥ |
| ೯ | ಧನಸ್ಸು | ಮೇಷಾದಿ | ಕುಜ-೩೬ ॥ | ಶು-೩೬॥ | ಬು-೩೬ ॥ | ಚಂ-೩೬॥ |
| ೧೦ | ಮಕರ | ಮಕರಾದಿ | ಶನಿ-೩೫ | ಶನಿ-೩೫ | ಗುರು-೩೫ | ಕುಜ-೩೫ |
| ೧೧ | ಕುಂಭ | ತುಲಾದಿ | ಶುಕ್ರ-೩೦ | ಕುಜ-೩೦ | ಗುರು-೩೦ | ಶನಿ-೩೦ |
| ೧೨ | ಮೀನ | ಕಟಕಾದಿ | ಚಂದ್ರ-೨೬॥। | ರವಿ-೨೬॥। | ಬುಧ-೨೬॥। | ಶು.೨೬॥। |

**ಮೇಷ-ಸಿಂಹ-ಧನಸ್ಸು ಈ ರಾಶಿಗಳಲ್ಲಿ ನವಾಂಶಾಧಿಪತ್ಯ ಶನಿಗೆ ಇಲ್ಲ.**

| | | | | | |
|---|---|---|---|---|---|
| ವಿ-೨೬॥। | ಬುಧ-೨೬॥। | ಶುಕ್ರ-೨೬॥। | ಕುಜ-೨೬॥ | ಗು-೩೬॥ | ಒಟ್ಟು ವಿಘಳಿಗೆ ೨೪೦ |
| ಶುಕ್ರ-೩೦ | ಬುಧ-೩೦ | ಚಂದ್ರ-೩೦ | ರವಿ-೩೦ | ಬುಧ-೩೦ | ೨೭೦ |
| ಶನಿ-೩೫ | ಗುರು-೩೫ | ಕುಜ-೩೫ | ಶು-೩೫ | ಬುಧ-೩೫ | ೩೧೫ |
| ಜ-೩೬॥ | ಗುರು-೩೬॥ | ಶನಿ-೩೬॥ | ಶನಿ-೩೬॥ | ಗು-೩೬ | ೩೩೦ |
| ರವಿ-೩೬ | ಬುಧ-೩೬॥ | ಶುಕ್ರ-೩೬। | ಕುಜ-೩೬॥ | ಗು-೩೬॥ | ೩೩೦ |
| ಕ್ರ-೪೫ | ಬುಧ-೩೫ | ಚಂದ್ರ-೩೫ | ರವಿ-೩೫ | ಬುಧ-೩೫ | ೩೧೫ |
| ನಿ-೩೫ | ಗುರು-೩೫ | ಕುಜ-೩೫ | ಶುಕ್ರ-೩೫ | ಬುಧ-೩೫ | ೩೧೫ |
| ಜ-೩೬॥ | ಗುರು-೩೬॥ | ಶನಿ-೩೬॥ | ಶನಿ-೩೬॥ | ಗು-೩೬॥ | ೩೩೦ |
| ವಿ-೩೬॥ | ಬುಧ-೩೬ | ಶುಕ್ರ-೩೭ | ಕುಜ-೩೬॥ | ಗು-೩೬॥ | ೩೩೦ |
| ಕ್ರ-೩೫ | ಬುಧ-೩೫ | ಚಂದ್ರ-೩೫ | ರವಿ-೩೫ | ಬುಧ-೩೫ | ೩೧೫ |
| ನಿ-೩೦ | ಗುರು-೩೦ | ಕುಜ-೩೦ | ಶು-೩೦ | ಶು-೩೦ | ೩೭೦ |
| ಜ-೨೬॥। | ಗುರು-೨೬॥। | ಶನಿ-೨೬॥ | ಶನಿ-೨೬॥ | ಗು-೨೬॥। | ೨೪೦ |

## ಕಾಲಾಮೃತಾನುಸಾರೇಣ ೧೨ ಲಗ್ನಗಳಿಗೂ ದ್ವಾದಶಾಂಶ ಶೋಧನಾ ಪಟ್ಟಿ

ಕಾಲಾಮೃತಾನುಸಾರೇಣ ದ್ವಾದಶಾಂಶ ಶೋಧನಾ ಪಟ್ಟಿ.

| | | | | | | | |
|---|---|---|---|---|---|---|---|
| ೧ | ಮೇಷ | ಕುಜ ವಿಘಳಿಗೆ ೨೦ | ಶು-೨೦ | ಬು-೨೦ | ಚಂ-೨೦ | ರ-೧೦ | ಬು-೨೦ |
| ೨ | ವೃಷಭ | ಶು-೨೨॥ | ಬು-೨೨॥ | ಚಂ-೨೨॥ | ರ-೨೨॥ | ಬು-೨೨॥ | ಶು-೨೨॥ |
| ೩ | ಮಿಥುನ | ಬುಧ-೨೬ | ಚಂ-೨೬ | ರ-೨೬ | ಬು-೨೬ | ಶು-೨೬ | ಕು-೨೬ |
| ೪ | ಕಟಕ | ಚಂ-೨೭॥ | ರ-೨೭॥ | ಬು-೨೭॥ | ಶು-೨೭॥ | ಕು-೨೭॥ | ಗು-೨೭॥ |
| ೫ | ಸಿಂಹ | ರ-೨೭॥ | ಬು-೨೭॥ | ಶು-೨೭॥ | ಕು-೨೭॥ | ಗು-೨೭॥ | ಶ-೨೭॥ |
| ೬ | ಕನ್ಯ | ಬುಧ-೨೬ | ಶು-೨೬ | ಕು-೨೬ | ಗು-೨೬ | ಶ-೨೬ | ಶ-೨೬ |
| ೭ | ತುಲ | ಶುಕ್ರ-೨೬ | ಕುಜ-೨೭ | ಗು-೨೬ | ಶ-೨೬ | ಶ-೨೬ | ಗು-೨೬ |
| ೮ | ವೃಶ್ಚಿಕ | ಕು-೨೭॥ | ಗು-೨೭॥ | ಶ-೨೭॥ | ಶ-೨೭॥ | ಗು-೨೭॥ | ಕು-೨೭॥ |
| ೯ | ಧನು | ಗು-೨೭॥ | ಶ-೨೭॥ | ಶ-೨೭॥ | ಗು-೨೭॥ | ಕು-೨೭॥ | ಶು-೨೭॥ |
| ೧೦ | ಮಕರ | ಶನಿ-೨೬ | ಶ-೨೬ | ಗು-೨೬ | ಕು-೨೬ | ಶು-೨೬ | ಬು-೨೬ |
| ೧೧ | ಕುಂಭ | ಶನಿ-೨೨॥ | ಗು-೨೨॥ | ಕು-೨೨॥ | ಶು-೨೨॥ | ಬು-೨೨॥ | ಚಂ-೨೨॥ |
| ೧೨ | ಮೀನ | ಗು-೨೦ | ಕು-೨೦ | ಶು-೨೦ | ಬು-೨೦ | ಚಂ-೨೦ | ರ-೨೦ |

## ಕಾಲಾಮೃತಾನುಸಾರ ೧೨ ಲಗ್ನಗಳಿಗೂ ದ್ವಾದಶಾಂಶ ಶೋಧನಾಪಟ್ಟಿ

| | | | | | | ಒಟ್ಟು ವಿಘಳಿ |
|---|---|---|---|---|---|---|
| -೨೦ | ಕು-೨೦ | ಗು-೨೦ | ಶ-೨೦ | ಶ-೨೦ | ಗು-೨೦ | ೨೪೦ |
| -೨೨॥ | ಗು-೨೨॥ | ಶ-೨೨॥ | ಶ-೨೨ | ಗು-೨೨॥ | ಕು-೨೨॥ | ೨೭೦ |
| -೨೬ | ಶ-೨೬ | ಶ-೨೬ | ಗು-೨೬॥ | ಕು-೨೯ | ಶುಕ್ರ-೨೬ | ೩೧೫ |
| ೨೭॥ | ಶು-೨೭॥ | ಗು-೨೭॥ | ಕು-೨೭॥ | ಶು-೨೭॥ | ಬು॥೨೭॥ | ೩೩೦ |
| ೨೭॥ | ಗು-೨೭॥ | ಕು-೨೭॥ | ಶು-೨೭॥ | ಬು-೨೭॥ | ಚಂ-೨೭॥ | ೩೩೦ |
| -೨೬ | ಕು-೨೬ | ಶು-೨೬ | ಬು-೨೬ | ಚಂ-೨೬ | ರ-೨೫ | ೩೧೫ |
| -೨೬ | ಶು-೨೬ | ಬು-೨೬ | ಚಂ-೨೬ | ರ-೨೬ | ಶು. ೨೭॥ | ೩೧೫ |
| -೨೭॥ | ಬು-೨೭॥ | ಚಂ-೨೭ | ರ-೨೭॥ | ಬು-೨೭॥ | ಶು-೨೭॥ | ೩೩೦ |
| -೨೭॥ | ಚಂ-೨೭ | ರ-೨೭॥ | ಬು-೨೭॥ | ಶು-೨೭॥ | ಕು-೨೭॥ | ೩೩೦ |
| -೨೬ | ರ-೨೬ | ಬು-೨೬ | ಶು-೨೬ | ಕು-೨೭ | ಗು-೨೬ | ೩೧೫ |
| ೨೨॥ | ಬು-೨೨ | ಶು-೨೬ | ಕು-೨೨ | ಗು-೨೨ | ಶನಿ-೨೨ | ೨೭೦ |
| -೨೦ | ಶು-೨೦ | ಕು-೨೦ | ಗು-೨೦ | ಶ-೨೦ | ಶನಿ-೨೦ | ೨೪೦ |

## ಕಾಲಾಮೃತಾನುಸಾರೇಣ ೧೨ ಲಗ್ನಗಳಿಗೂ ತ್ರಿಂಶಾಂಶ ಶೋಧನಾಪಟ್ಟಿ

ಕಾಲಾಮೃತಾನುಸಾರೇಣ ಷಟ್ವರ್ಗ ಶೋಧನಾ ಪಟ್ಟಿ

| | | | | |
|---|---|---|---|---|
| ೧ | ಮೇಷ | ಓಜೇ ಕುಜಾದಯಃ ಭಾಗ ೧ಕ್ಕೆ ೮ ವಿಘಳಿಗೆ | ಕುಜ ೫ ಭಾಗಕ್ಕೆ ೪೦ ವಿಘಳಿಗೆ | ಶನಿ ೫ ಭಾಗ ೪೦ |
| ೨ | ವೃಷಭ | ಸಮೇ ಶುಕ್ರಾದಯಃ ಭಾಗ ೧ಕ್ಕೆ ೯ ವಿಘಳಿಗೆ | ಶುಕ್ರ ೫ ಭಾಗಕ್ಕೆ ೪೫ | ಬುಧ ೭ ಭಾಗ ೬೩ |
| ೩ | ಮಿಥುನ | ಓಜೇ ಭಾಗ ೧ಕ್ಕೆ ೧೦॥ ವಿಘಳಿಗೆ | ಕುಜ ೫ ಭಾಗಕ್ಕೆ ೫೨॥ | ಶನಿ ೫ ಭಾಗ ೫೨॥ |
| ೪ | ಕಟಕ | ಸಮೇ ಭಾಗ ೧ಕ್ಕೆ ೧೧ ವಿಘಳಿಗೆ | ಶುಕ್ರ ೫ ಭಾಗಕ್ಕೆ ೫೫ | ಬುಧ ೭ಕ್ಕೆ ೭೭ |
| ೫ | ಸಿಂಹ | ಓಜೇ ಭಾಗ ೧ಕ್ಕೆ ೧೧ ವಿಘಳಿಗೆ | ಕುಜ ೫ ಭಾಗಕ್ಕೆ ೫೫ | ಶನಿ ೫ಕ್ಕೆ ೫೫ |
| ೬ | ಕನ್ಯ | ಸಮೇ ಭಾಗ ೧ಕ್ಕೆ ೧೦॥ ವಿಘಳಿಗೆ | ಶುಕ್ರ ೫ ಭಾಗಕ್ಕೆ ೫೨॥ | ಬುಧ ೭ಕ್ಕೆ ೭೩॥ |
| ೭ | ತುಲ | ಓಜೇ ಭಾಗ ೧ಕ್ಕೆ ೧೦॥ ವಿಘಳಿಗೆ | ಕುಜ ೫ ಭಾಗಕ್ಕೆ ೫೨॥ | ಶನಿ ೫ಕ್ಕೆ ೫೨॥ |
| ೮ | ವೃಶ್ಚಿಕ | ಸಮೇ ಭಾಗ ೧ಕ್ಕೆ ೧೧ ವಿಘಳಿಗೆ | ಶುಕ್ರ ೫ ಭಾಗಕ್ಕೆ ೫೫ | ಬುಧ ೭ಕ್ಕೆ ೭೭ |
| ೯ | ಧನು | ಓಜೇ ಭಾಗ ೧ಕ್ಕೆ ೧೧ ವಿಘಳಿಗೆ | ಕುಜ ೫ ಭಾಗಕ್ಕೆ ೫೫ | ಶನಿ ೫ಕ್ಕೆ ೫೫ |
| ೧೦ | ಮಕರ | ಸಮೇ ಭಾಗ ೧ಕ್ಕೆ ೧೦॥ ವಿಘಳಿಗೆ | ಶುಕ್ರ ೫ ಭಾಗಕ್ಕೆ ೫೨॥ | ಬುಧ ೭ಕ್ಕೆ ೭೩॥ |
| ೧೧ | ಕುಂಭ | ಓಜೇ ಭಾಗ ೧ಕ್ಕೆ ೯ ವಿಘಳಿಗೆ | ಕುಜ ೫ ಭಾಗಕ್ಕೆ ೪೫ | ಶನಿ ೫ಕ್ಕೆ ೪೫ |
| ೧೨ | ಮೀನ | ಸಮೇ ಭಾಗ ೧ಕ್ಕೆ ೮ ವಿಘಳಿಗೆ | ಶುಕ್ರ ೫ ಭಾಗಕ್ಕೆ ೪೦ | ಬುಧ ೭ಕ್ಕೆ ೫೬ |

## ಬೃಹಜ್ಜಾತಕಾನುಸಾರೇಣ ೧೨ ಲಗ್ನಗಳಿಗೂ ತ್ರಿಂಶಾಂಶ ಶೋಧನಾ ಪಟ್ಟಿ

| | | | | |
|---|---|---|---|---|
| ರು-೮ಭಾಗ ೬೪ | ಬುಧ-೭ ಭಾಗ ೫೬ | ಶುಕ್ರ-೫ ಭಾಗ ೪೦ | ಒಟ್ಟು ವಿಘಳಿಗೆ ೨೪೦ | |
| ರು-೮ ಭಾಗ ೭೨ | ಶನಿ-೫ ಭಾಗ ೫೪ | ಕುಜ-೪ ಭಾಗ ೪೫ | ೨೭೦ | |
| ರು-೮ ಭಾಗ ೮೪ | ಬುಧ-೭ ಭಾಗ ೭೩॥ | ಶುಕ್ರ-೫ ಭಾಗ ೫೨॥ | ೩೧೫ | ತ್ರಿಂಶಾಂಶದಷ್ಟು ಹೋರರ ಚಂದ್ರರಿಗೆ ೩೬॥ |
| ರು-೮ ಕ್ಕೆ ೮೮ | ಶನಿ-೫ ಕ್ಕೆ ೫೫ | ಕುಜ-೫ ಕ್ಕೆ ೫೫ | ೩೩೦ | |
| ರು-೮ ಕ್ಕೆ ೮೮ | ಬುಧ-೭ ಕ್ಕೆ ೭೭ | ಶುಕ್ರ-೫ ಕ್ಕೆ ೫೫ | ೩೩೦ | |
| ಗುರು-೮ ಕ್ಕೆ ೮೪ | ಶನಿ-೫ ಕ್ಕೆ ೫೨॥ | ಕುಜ-೫ ಕ್ಕೆ ೫೨॥ | ೩೧೫ | |
| ಗುರು-೮ ಕ್ಕೆ ೮೪ | ಬುಧ-೭ ಕ್ಕೆ ೭೩॥ | ಶುಕ್ರ-೫ ಕ್ಕೆ ೫೨॥ | ೩೧೫ | |
| ಗುರು-೮ ಕ್ಕೆ ೮೮ | ಶನಿ-೫ ಕ್ಕೆ ೫೫ | ಕುಜ-೫ ಕ್ಕೆ ೫೫ | ೩೩೦ | |
| ಗುರು-೮ ಕ್ಕೆ ೮೮ | ಬುಧ-೭ ಕ್ಕೆ ೭೭ | ಶುಕ್ರ-೫ ಕ್ಕೆ ೫೫ | ೩೩೦ | |
| ಗುರು-೮ ಕ್ಕೆ ೮೪ | ಶನಿ-೫ ಕ್ಕೆ ೫೨॥ | ಕುಜ-೫ ಕ್ಕೆ ೫೨॥ | ೩೧೫ | |
| ಗುರು-೮ ಕ್ಕೆ ೭೨ | ಬುಧ-೭ ಕ್ಕೆ ೬೩ | ಶುಕ್ರ-೫ ಕ್ಕೆ ೪೫ | ೨೭೦ | |
| ಗುರು-೮ ಕ್ಕೆ ೬೪ | ಶನಿ-೫ ಕ್ಕೆ ೪೦ | ಕುಜ-೫ ಕ್ಕೆ ೪೦ | ೨೪೦ | |

## ೧೨ ಲಗ್ನಗಳಿಗೂ ಕಾಲಾವೃತಾನುಸಾರೇಣ ಷಡ್ವರ್ಗ ಶೋಧನಾ ಪಟ್ಟಿ

ಕಾಲಾವೃತಾನುಸಾರವಾಗಿ ಷಡ್ವರ್ಗ ಶೋಧನಾ ಪಟ್ಟಿ

| | | | ಪುಷ್ಕರಾಂಶ ಭಾಗಗಳು | ವರ್ಗೋತ್ತಮಾಂಶ ಸ್ಥಾನಗಳು. |
|---|---|---|---|---|
| ೧ | ಮೇಷ | ಮೂಲ ತ್ರಿಕೋಣ ಸ್ವಕ್ಷೇತ್ರ ಭಾಗಗಳನ್ನು ಯಾವ ಯಾವ ರಾಶಿಯಲ್ಲಿ ಯಾವ ಯಾವ ಗ್ರಹಗಳೆಂಬುದನ್ನು ೧ ನೇ ಭಾಗದಲ್ಲಿ ವಿವರಿಸಿದೆ. | ೨೧ ನೇ ಭಾಗ | ೧ |
| ೨ | ವೃಷಭ | | ೧೪ ನೇ ಭಾಗ | ೫ |
| ೩ | ಮಿಥುನ | | ೨೪ ನೇ ಭಾಗ | ೯ |
| ೪ | ಕರ್ಕಾಟಕ | | ೭ ನೇ ಭಾಗ | ೧ |
| ೫ | ಸಿಂಹ | | ೨೧ ನೇ ಭಾಗ | ೫ |
| ೬ | ಕನ್ಯ | | ೧೪ ನೇ ಭಾಗ | ೯ |
| ೭ | ತುಲಾ | | ೨೪ ನೇ ಭಾಗ | ೧ |
| ೮ | ವೃಶ್ಚಿಕ | | ೭ ನೇ ಭಾಗ | ೫ |
| ೯ | ಧನಸ್ಸು | | ೨೧ನೇ ಭಾಗ | ೯ |
| ೧೦ | ಮಕರ | | ೧೪ ನೇ ಭಾಗ | ೧ |
| ೧೧ | ಕುಂಭ | | ೨೪ ನೇ ಭಾಗ | ೫ |
| ೧೨ | ಮೀನ | | ೭ ನೇ ಭಾಗ | ೯ |

## ...ಲಾಮೃತಾನುಸಾರ ೧೨ ಲಗ್ನಗಳಿಗೂ ಷಡ್ವರ್ಗ ಶೋಧನಾ ಪಟ್ಟಿ

| ...ಗ್ನ | ಹೋರಾ | ದ್ರೇಕ್ಕಾಣ | ನವಾಂಶ | ದ್ವಾದಶಾಂಶ | ತ್ರಿಂಶಾಂಶ | ವರ್ಗಶುದ್ಧಿ ಸಂಖ್ಯೆ |
|---|---|---|---|---|---|---|
| ...ಜ | ಚಂದ್ರ | ಗುರು | ಶುಕ್ರ | ಗುರು | ಬುಧ | ೫ |
| ...ಕ್ರ | ಚಂದ್ರ | ಶುಕ್ರ | ಶುಕ್ರ | ಶುಕ್ರ | ಗುರು | ೬ |
| ...ಧ | ಚಂದ್ರ | ಬುಧ | ಶುಕ್ರ | ಶುಕ್ರ | ಬುಧ | ೬ |
| ...ದ್ರ | ಚಂದ್ರ | ಚಂದ್ರ | ಬುಧ | ಬುಧ | ಬುಧ | ೬ |
| ರವಿ | ಚಂದ್ರ | ಗುರು | ಶುಕ್ರ | ಕುಜ | ಬುಧ | ೪ |
| ಬುಧ | ಚಂದ್ರ | ಶುಕ್ರ | ಶುಕ್ರ | ಗುರು | ಗುರು | ೬ |
| ...ಕ್ರ | ಚಂದ್ರ | ಬುಧ | ಶುಕ್ರ | ಚಂದ್ರ | ಬುಧ | ೪ |
| ...ಜ | ಚಂದ್ರ | ಚಂದ್ರ | ಬುಧ | ಶನಿ | ಬುಧ | ೬ |
| ...ರು | ಚಂದ್ರ | ಗುರು | ಶುಕ್ರ | ಬುಧ | ಬುಧ | ೪ |
| ಶನಿ | ಚಂದ್ರ | ಶುಕ್ರ | ಶುಕ್ರ | ಶುಕ್ರ | ಗುರು | ೫ |
| ಶನಿ | ಚಂದ್ರ | ಬುಧ | ಶುಕ್ರ | ಗುರು | ಬುಧ | ೫ |
| ...ರು | ಚಂದ್ರ | ಚಂದ್ರ | ಬುಧ | ಶುಕ್ರ | ಬುಧ | ೬ |

# ಜಾತಕಫಲ ನಿರ್ಣಯ ಕ್ರಮ

ಜನ್ಮಕಾಲಕ್ಕೆ ಸರಿಯಾಗಿ ಶಾಸ್ತ್ರದೃಕ್ಸಿದ್ಧ ಗಣಿತಪ್ರಕಾರ ಅತಿ ಸೂಕ್ಷ್ಮವಾಗಿ ಗ್ರಹಗಳನ್ನು ಲಗ್ನಾದಿಭಾವ ಮುಂತಾದ್ದನ್ನು ಸಿದ್ಧಪಡಿಸಿಕೊಂಡು ಗ್ರಹಶೀಲ ರಾಶಿಶೀಲ ಗ್ರಹದ್ರವ್ಯಕಾಲ ಇತ್ಯಾದಿಗಳಿಂದಲೂ ಜೀವನವೃತ್ತಿ-ಅರಿಷ್ಟಯೋಗ-ಶುಭಯೋಗ-ಭಾವಸ್ಥಾನ-ದೃಷ್ಟಿಯೋಗ-ಮೊದಲಾದ್ದರಿಂದಲೂ ತಿಳಿಯಬರುವ ಜಾತಕಶಾಸ್ತ್ರೋಕ್ತವಾದ ಆಯಾಯ ಗ್ರಹದ ದಶಾಕಾಲದಲ್ಲಿ ನಡೆಯತಕ್ಕ ದಶಾಫಲದ ಒಡನೆ ಕಾಲಚಕ್ರ ಶಾಸ್ತ್ರದಲ್ಲಿ ಹೇಳಲ್ಪಡುವ ಮಂಡೂಕ ಗತಿ-ಮರ್ಕಟಗತಿ-ಸಿಂಹಾವಲೋಕನಾದಿ ಗಂಡಕಾಲಗಳನ್ನು ರುದ್ರ, ಶೂಲ, ಕಾಲ, ಫಲಾದಿಗಳನ್ನು ಅಷ್ಟಕವರ್ಗ ಬಿಂದುಫಲಗಳನ್ನು ಗೋಚಾರಫಲ, ಅಂಗಗ್ರಹಚಾರಫಲ, ಗ್ರಹಲತ್ತಾಫಲ, ಗ್ರಹಘಾತಫಲ ಇತ್ಯಾದಿ ಫಲಗಳನ್ನು ಸೇರಿಸಿ ಪ್ರಬಲಫಲದಿಂದ ಬಾಧಿತವಾಗಿ ಹೋಗುವ ದುರ್ಲಭಫಲವನ್ನು ಕಳೆದುಹಾಕಿ ನಿಲ್ಲುವ ಸಂಭಾವ್ಯಫಲವನ್ನು ಜಾತಕನ ಯೋಗ್ಯತಾನುಸಾರವಾಗಿ ಗ್ರಹ-ಕಾಲ, ದೇಶ ಮುಂತಾದ ಬಲಕ್ಕೆ ತಕ್ಕಂತೆ ಹೇಳಬೇಕು.

ಗ್ರಹಭುಕ್ತಿ ಅಂತರ್ಭುಕ್ತಿ ಕಾಲ ಮುಂತಾದ್ದನ್ನು ೧ನೇ ಭಾಗದಲ್ಲೇ ತಿಳಿಸಿ ಇರುತ್ತದಷ್ಟೆ? ಪ್ರಕೃತ ದಶಾ ಅಂತರ್ದಶಾ ಫಲಗಳನ್ನು ಮಾತ್ರ ಸಂಕ್ಷೇಪವಾಗಿ ಇಲ್ಲಿ ತಿಳಿಸಿ ಇದೆ.

## ರವಿದಶಾ ಸಂವತ್ಸರ ೬ಕ್ಕೆ ಫಲ

ದಶಾಧಿಪತಿಯಾದ ರವಿಯು ಜನ್ಮಕಾಲದಲ್ಲಿ ಸ್ಥಾನಬಲದಿಂದ ಅಧಿಕನಾಗಿದ್ದರೆ ಅವನ ದಶಾಕಾಲದಲ್ಲಿ ಜಾತಕನಿಗೆ ಕೃಷಿಯಿಂದ ಧನಲಾಭ, ಪಶುಲಾಭ, ಭೂಲಾಭ, ರಕ್ತವಸ್ತ್ರ, ರಾಜಸನ್ಮಾನ, ಹೆರವರ ಒಡವೆ ದೊರೆಯುತ್ತೆ. ದೆಶೆಯ ಪರಿಪಾಕಕಾಲದಲ್ಲಿ ಶಯನಸೌಖ್ಯ, ಉಪಕಾರ, ಕೀರ್ತಿ, ಆಭರಣ, ಬಂಧು ಸಂತೋಷ ಇವುಗಳು ಲಭಿಸುತ್ತೆ. ದಶಾಧಿಪತಿಯಾದ ರವಿಗೆ ಸ್ಥಾನಬಲವಿಲ್ಲದಿದ್ದರೆ ಮೇಲೆ ಹೇಳಿದ ಫಲಕ್ಕೆ ವಿರೋಧವೂ, ಪರಸ್ಥಳ ಪ್ರಯಾಣವೂ ಉಂಟಾಗುತ್ತೆ, ರವಿಗೆ ದಿಗ್ಬಲವಿದ್ದರೆ ಅವನ ದೆಶೆಯಿಂದ ಭೂಮಿ, ಧನ, ಕೀರ್ತಿಗಳುಂಟಾಗುವುವು, ಕಾಲಬಲವಿದ್ದರೆ ಕೃಷಿ ಜೀವನ, ಉದ್ಯೋಗಲಾಭ; ನಿಸರ್ಗ ಬಲವಿದ್ದರೆ ವಾಹನಲಾಭ, ಇಲ್ಲದಿದ್ದರೆ ಚೋರಾಗ್ನಿ ರಾಜಭಯಗಳು ; ಚೇಷ್ಟಾಬಲವಿದ್ದರೆ ಚೇಷ್ಟೆಗೆ ತಕ್ಕ ಕುಟುಂಬಸೌಖ್ಯ; ಶುಭಗ್ರಹ ಬಲದೃಷ್ಟಿಯಿದ್ದರೆ ನೋಡಿದ ಗ್ರಹಫಲವೂ ಸೇರುತ್ತೆ. ಷಷ್ಟ್ಯಂಶಗಳಲ್ಲಿ ರವಿಯು ಕ್ರೂರಾಂಶವಲ್ಲಿದ್ದರೆ ಸ್ಥಾನಭ್ರಂಶ-ರಾಜದಂಡ, ಚೋರಭಯ, ಸಿಟ್ಟು-ತಲೆನೋವು, ಕಣ್ಣು ಬೇನೆ-ಪಿತೃಗಂಡ-ಸೌಮ್ಯಾಂಶದಲ್ಲಿದ್ದರೆ ಸಮಾಧಾನ-ಶಾಂತಿ-

ಘುವೃತ್ತಿ-ಉಚ್ಚನಾದರೂ ನೀಚಾಂಶದಲ್ಲಿದ್ದರೂ ಕಳತ್ರಹಾನಿ-ನೆಂಟರ ಹಗೆ-ಪಿತೃ
ಪ-ನೀಚನಾದರೂ ಉಚ್ಚಾಂಶದಲ್ಲಿದ್ದರೆ ಶುಭಫಲವನ್ನು ತೋರಿ ದಶಾಂತ್ಯದಲ್ಲಿ
ಬಂದೀತು, ಅತ್ಯುಚ್ಚದಲ್ಲಿದ್ದರೆ ಅಶ್ವ-ವಾಹನ-ವಸ್ತ್ರ ಆಭರಣ-ಧನ-ಅಧಿಕಾರ
ಧುಸೌಖ್ಯ ಮುಂತಾದ ಶುಭಗಳುಂಟಾಗುವುದು. ಉಚ್ಚಭಾಗಗಳಲ್ಲಿ ಇದ್ದರೆ
ಧಾರಣ ಶುಭ, ಅತಿ ನೀಚದಲ್ಲಿ ಧನ-ಬಂಧುಹಾನಿ, ರೋಗ-ವಿಪತ್ತು-ನೀಚದಲ್ಲಿ
ನಭಂಗ-ಧನನಾಶ-ಅಪಕೀರ್ತಿ-ನೀಚರಾಶಿಯಲ್ಲಿ ಪೀಡೆ-ಅಧಿಕಾರ ಭಂಗ-ಪುತ್ರ
ನಿ-ಅರಿಮಿತ್ರಕ್ಷೇತ್ರದಲ್ಲಿಮಿತ್ರಲಾಭ, ಮಿತ್ರಕ್ಷೇತ್ರದಲ್ಲಿ ಅರ್ಥಲಾಭ-ಸಮರಾಶಿಯಲ್ಲಿ
ಟುಂಬಸುಖ-ಅತಿಶತ್ರುರಾಶಿಯಲ್ಲಿ ಕಡುಕಷ್ಟ-ಶತ್ರುರಾಶಿಯಲ್ಲಿ ಕಲಹ, ಧನಹಾನಿ,ಜನ
ರೋಧ-ವಿದೇಶವಾಸ-ಶುಭಯುಕ್ತನಾದರೆ ಶುಭವಿನೋಧ. ಶುಭಗ್ರಹದೃಷ್ಟನಾದರೆ
ಷ್ಟ, ಉತ್ಸವ,ಪಾಪಯುಕ್ತನಾದರೆ ಕುಭೋಜನ,ಕ್ಲೇಶ,ಅಸೌಖ್ಯ,ಪಾಪದೃಷ್ಟನಾದರೆ
ೃಗಂಡ-ಕುಟುಂಬಕಷ್ಟ-ಮೂಲತ್ರಿಕೋಣದಲ್ಲಿದ್ದರೆ ಸ್ಥಿರ ಸುಖಲಾಭ-ಸ್ವಕ್ಷೇತ್ರದಲ್ಲಿ
ರೆ ಕೃಷಿ-ಧನಲಾಭ-ಜೀರ್ಣೋದ್ಧಾರ-ಕೇಂದ್ರದಲ್ಲಿದ್ದರೆ ದೇಶಭ್ರಮಣೆ-ಬಂಧು
ರೋಗ-ಕಲಹ, ತ್ರಿಕೋಣದಲ್ಲಿದ್ದರೆ ಚಿತ್ತವೈಕಲ್ಯ-ಕರ್ಮಭ್ರಂಶ-ಅಸೌಖ್ಯ-ಪಿತ್ತ
ರ-ಉಚ್ಚಾಂಶದಲ್ಲಿ ಜಯ-ಪಿತೃವರ್ಗಸೌಖ್ಯ-ನೀಚಾಂಶದಲ್ಲಿ ಇದಕ್ಕೆ ವಿರೋಧ
ತ್ತು ಜ್ವರಾದಿರೋಗ ಮುಂತಾದ ಫಲಗಳುಂಟಾಗುವುವು.

---

## ರವಿದಶಾದಲ್ಲಿ ರವಿಭುಕ್ತಿ ೩ ತಿಂಗಳು ೧೮ ದಿನಕ್ಕೆ ಫಲ

ರವಿಯು ಜನ್ಮಲಗ್ನಕ್ಕಿಂತಲೂ ಕೇಂದ್ರತ್ರಿಕೋಣ ಸ್ವಕ್ಷೇತ್ರ ಉಚ್ಚಾದಿಗಳಲ್ಲಿ
ನಬಲವುಳ್ಳವನಾಗಿದ್ದರೆ ಅವನ ದೆಶೆಯೊಳಗೆ ಅವನ ಭುಕ್ತಿಕಾಲದಲ್ಲಿ ತೀರ್ಥ
ತ್ರೆ, ದೇವರ ದರ್ಶನ, ಪ್ರಭುಪ್ರೀತಿ, ಕುಟುಂಬಸೌಖ್ಯ, ಪಶುವಾಹನ
ಲಾಭ, ಕಲ್ಯಾಣಕಾರ್ಯ ಲಭಿಸುತ್ತೆ. ಭುಕ್ತಿನಾಥನಾದ ರವಿಯು ಜನ್ಮಕಾಲದಲ್ಲಿ,
ಷ್ಟಮವ್ಯಯಗಳಲ್ಲಿಯೂ ನೀಚಶತೃಕ್ಷೇತ್ರಗಳಲ್ಲಿಯೂ ಇದ್ದರೆ ಅವನ ಭುಕ್ತಿಯಲ್ಲಿ
ಕ್ಕೆ ಭಂಗ, ದಾಯಾದಿಗಳ ಜಗಳ, ಬಂಧುಜನದ್ವೇಷ, ಸರ್ಕಾರದ ತೊಂದರೆ,
ಭೂಹಾನಿ, ಕುಟುಂಬಕಲಹ, ದೇಹಜಾಡ್ಯ, ಚಿಂತೆ, ಅಗ್ನಿಭಯ, ಶತ್ರು
ರ, ವ್ರಣಪೀಡೆ. ಪಾಪಯುಕ್ತನಾಗಿದ್ದರೆ ಅನಿಷ್ಟಫಲ, ಕಾರ್ಯಹಾನಿ, ದೇಶ
ಯನ. ಲಗ್ನಾಧಿಪತಿಯಿಂದ ಕೂಡಿದ್ದರೆ ಮುಂಚೆ ಸೌಖ್ಯ, ಬಳಿಕ ಅರ್ಥಹಾನಿ,
ನುವೆ, ರಾಜದರುಶನ. ನವಮಾಧಿಪತಿಯಿಂದ ಕೂಡಿದ್ದರೆ ಧರ್ಮ, ಭಾಗ್ಯ,
ನ, ವೃದ್ಧಿ. ೪ ನೇ ಅಧಿಪತಿಯೊಡನೆ ಇದ್ದರೆ ಕ್ಷೇತ್ರ, ವಾಹನ, ಪಶುಲಾಭ,
ನ್ರನೊಡನೆ ಕೂಡಿದ್ದರೆ ವಸ್ತ್ರಾಭರಣಲಾಭ, ತಾಯಿನೆಂಟರ ವಿರೋಧ, ತಲೆ
ವು. ಕುಜಸಹಿತನಾಗಿದ್ದರೆ ಜ್ಞಾತಿಕಲಹ, ಹೊಟ್ಟೆನೋವು, ಆಲೋಚನೆ

ಕೇಡು. ಸೌಮ್ಯಗ್ರಹದಿಂದ ಕೂಡಿದ್ದರೆ ದೇವಪೂಜೆ, ಉದ್ಯೋಗಸಿದ್ಧಿ-ವರ್ತಕತನ, ಗುರು ಸಹಿತನಾದರೆ ವಿವಾಹಕಾರ್ಯ, ಸ್ತ್ರೀಜನನ, ವಾಹನ ಸುಖಲಾಭ, ಶನಿ ಸಹಿತ ನಾದರೆ ಕ್ಷೇತ್ರಹಾನಿ, ಭೃತ್ಯವಿರೋಧ, ಸ್ಥಳತಪ್ಪುವಿಕೆ, ರಾಜಭಯ, ೨-೭ ರಲ್ಲಿ ದ್ದರೆ ಅಪಮೃತ್ಯುಭಯ, ಅದಕ್ಕಾಗಿ ಸೂರ್ಯನಮಸ್ಕಾರ, ರುದ್ರಾಭಿಷೇಕ, ಕೆಂಪು ಆಕಳು ದಾನ ಇವುಗಳನ್ನು ಮಾಡಬೇಕು.

---

## ರವಿದಶಾದಲ್ಲಿ ಚಂದ್ರಭುಕ್ತಿ ತಿಂಗಳು ೬ಕ್ಕೆ ಫಲ

ರವಿದೆಶೆಯಲ್ಲಿ ಭುಕ್ತಿನಾಥನಾದ ಚಂದ್ರನಿಗೆ ಸ್ಥಾನಬಲವಿದ್ದರೆ ಧನಧಾನ್ಯ ಕುಟುಂಬಸೌಖ್ಯ, ಸ್ಥಾನಬಲ ಕೆಟ್ಟರೆ ಅದಕ್ಕೆ ಭಂಗ, ಕ್ರೂರಗ್ರಹಯುಕ್ತನಾದರೆ ಗ್ರಹ ಭಾವಕ್ಕೆ ತಕ್ಕ ಕಷ್ಟ, ಶುಭಯುಕ್ತನಾದರೆ ಯುಕ್ತಕಾರ್ಯಾನುಕೂಲ, ಗುರುವಿನೊಡ ಗೂಡಿದರೆ ಗರ್ಭಿಣೀ ಸಂಗ, ಶುಕ್ರನೊಡನೆ ಭೂಕ್ಷೇತ್ರ ಪುತ್ರಲಾಭ. ಶನಿಯಿಂದ ಅನಿಷ್ಟಫಲ ದುಷ್ಟಸ್ಥಾನದಲ್ಲಿರುವ ಚಂದ್ರನಿಂದ ರೋಗಪೀಡೆ, ಶುಭ ಸ್ಥಾನದಿಂದ ಶುಭಯೋಗ, ೭ ರಲ್ಲಿ ಅಪಮೃತ್ಯು. ಅದರ ಪರಿಹಾರಕ್ಕಾಗಿ ದುರ್ಗಾಮಂತ್ರ ಜಪವನ್ನು ಬಿಳೀ ಎತ್ತಿನ ದಾನವನ್ನು ಮಾಡಬೇಕು.

---

## ರವಿದಶಾದಲ್ಲಿ ಕುಜಭುಕ್ತಿ ४ ತಿಂಗಳು ೬ ದಿನಕ್ಕೆ ಫಲ

ರವಿದಶಾ ಕುಜಭುಕ್ತಿಫಲ:—ಕುಜನು ಸ್ಥಾನಬಲಾಧಿಕವಾದರೆ ಕೃಷಿಸಮೃದ್ಧಿ' ಭೂಧನಲಾಭ, ಕೆಂಪು ದಿನಸುಗಳು ಬರುತ್ತೆ. ಕುಟುಂಬ ಸೌಖ್ಯ, ಪುತ್ರಪ್ರಾಪ್ತಿ, ಜಯ, ಸ್ಥಾನಬಲರಹಿತನಾದರೆ ಸೋದರ ವಿರೋಧ, ಭ್ರಾತೃವರ್ಗಹಾನಿ, ಬಂಧು ವಿಯೋಗ, ಪಶುವಾಹನನಾಶ, ರೋಗಪೀಡೆ, ಚೋರಬಾಧೆ, ರಾಜದಂಡನ, ಕಾರ್ಯಭಂಗ, ಸ್ತ್ರೀಕಲಹ, ಶತ್ರುವೃದ್ಧಿ, ಶುಭಯುಕ್ತನಾದರೆ ಭಾಗ್ಯವೃದ್ಧಿ, ಪಾಪ ಯುಕ್ತನಾದರೆ ಧನಹಾನಿ, ರವಿಯುಂದ ಕೂಡಿದರೆ ಪಿತೃವರ್ಗಕ್ಲೇಶ ಉದ್ಯೋಗಭಂಗ, ಚಂದನ ವಡವೆ ವಸ್ತ್ರಾಭರಣ, ಕಲ್ಯಾಣಲಾಭ. ಬುಧನೊಡನೆ ಸ್ತ್ರೀವಿದ್ಯಾ, ಬಂಧು ಗೋಷ್ಠಿ, ಶತ್ರುವೃದ್ಧಿ, ಗುರುವಿನೊಡನೆ ಪುತ್ರಪೀಡೆ, ಧನಹಾನಿ, ದೇಹಾಲಸ್ಯ, ಶುಕ್ರನೊಡನೆ ವ್ಯಭಿಚಾರವಿವಾಹ; ಶನಿಯೊಡನೆ ಬಸರು ಇಳಿಯುವಿಕೆ, ಕಲಹ, ೬-೮ರಲ್ಲಿ ಇದ್ದರೆ ಅನ್ನಸೌಖ್ಯ ಕಡಿಮೆ, ಕಳ್ಳರಕಾಟ, ಸರಕಾರದ ತೊಂದರೆ, ಪಶು ಹಾನಿ, ಶುಭಸ್ಥಾನಾಧಿಪತಿಯಿಂದ ಕೂಡಿದರೆ ಶುಭ, ಪಾಪನಿಂದ ಪಾಪ, ಮಾರಕ ಸ್ಥಾನದಲ್ಲಿ ಇದ್ದರೆ ಅಪಮೃತ್ಯು ಅದಕ್ಕಾಗಿ ಕುಮಾರಜಪವನ್ನು ವೃಷಭದಾನವನ್ನು ಮಾಡಬೇಕು.

........

## ಂದೆಶೆಯಲ್ಲಿ ರಾಹುಭುಕ್ತಿ ೧೧ ತಿಂಗಳು ೨೪ ದಿನಕ್ಕೆ ಫಲ

ರವಿದಶಾ ರಾಹು ಭುಕ್ತಿಯಲ್ಲಿ ರಾಹುವು ಸ್ಥಾನ ಬಲಯುಕ್ತನಾದರೆ ಮುಂಚೆ ತಿಂಗಳವರಿಗೂ ಕಷ್ಟಗಳು, ನಂತರ ಶುಭ ; ಶುಭಯುಕ್ತನಾದರೆ ಶುಭಫಲಗಳು, ಚ್ಚಸ್ಥಾನವಲ್ಲಿದ್ದರೆ ಕುಟುಂಬ ಭಾಗ್ಯ ವೃದ್ಧಿ, ಆರೋಗ್ಯ ಶುಭಕಾರ್ಯ ; ೬-೮- ರಲ್ಲಿ ಪಾಪಗ್ರಹದೊಡನೆ ಕೂಡಿದ್ದರೂ ನೋಡಲ್ಪಟ್ಟರೂ ಸೆರೆಶಾಲೆ, ರಾಜದಂಡ, ಗಂಡ, ಕುಟುಂಬಪೀಡೆ, ಧನಧಾನ್ಯ ಪಶುಹಾನಿ, ಅವನು ನೋಡುವ ಸೂರ್ಯ, ನೆ ಕಲಹ, ಬುದ್ಧಿವಿಕಾರ, ಮಾನಹಾನಿ, ಚಂದ್ರನಿಂದ ಕೂಡಿದರೆ ಸ್ತ್ರೀ ಕಲಹ, ಗಪೀಡ, ಬಂಧು ಹಾನಿ ; ಕುಜಯುಕ್ತನಾದರೆ ಜ್ವರ, ಕುರು ಜಗಳ, ಯುದ್ಧ ಪ್ರಾಣಹಾನಿ ; ಬುಧಯುಕ್ತನಾದರೆ ಭುಕ್ತಿಯು ಆದಿಯಲ್ಲಿ ಕಷ್ಟ, ಆ ಮೇಲೆ ಖ್ಯ ; ಗುರುಯುಕ್ತನಾದರೆ ಗರ್ಭಕ್ಕೆ ಭಂಗ, ಮಿತ್ರದ್ವೇಷ, ಶುಕ್ರಯುಕ್ತನಾದರೆ ್ರಬಂಧು ಸೌಖ್ಯ, ವಸ್ತ್ರ ವಾಹನಲಾಭ, ಶನಿಯಿಂದ ನೋಡಲ್ಪಟ್ಟರೆ ನೀಚ ಸ್ತ್ರೀ ನ, ನೀಚಸೇವೆ ; ದುಷ್ಟಸ್ಥಾನವಲ್ಲಿದ್ದರೆ ಬಹಳ ಬೇನೆ, ತೃತೀಯ ಕೇಂದ್ರಕೋಣ ಲ್ಲಿದ್ದರೆ ಪ್ರಭು ಪೂಜ್ಯತೆ, ಕಲ್ಯಾಣ, ಧನಧಾನ್ಯ ಪಶುವೃದ್ಧಿ, ಪುತ್ರಿಜನನ, ದಶಾಧಿ ಗೆ ೬-೮ ರಲ್ಲಿ ಪಾಪಯುಕ್ತನಾದರೆ ವಿಷಗಂಡ, ಅಥವಾ ಪುತ್ರಹಾನಿ ಅಥವಾ ನಭ್ರಂಶ, ಮಾರಕಸ್ಥಾನದಲ್ಲಿದ್ದರೆ ಅಪಮೃತ್ಯು. ಅದಕ್ಕೆ ದುರ್ಗಾಜಪ ಛಾಗ ನ ಇತ್ಯಾದಿ ಶಾಂತಿ.

---

## ಂದೆಶೆಯಲ್ಲಿ ಗುರುಭುಕ್ತಿ ೯ ತಿಂಗಳು ೧೭ ದಿನಕ್ಕೆ ಫಲ

ರವಿದಶಾ ಗುರುಭುಕ್ತಿಯಲ್ಲಿ ಗುರುವು ಜನ್ಮಕಾಲದಲ್ಲಿ ಉಚ್ಚಕೇಂದ್ರ ತ್ರಿಕೋಣ ತ್ರಸ್ವಕ್ಷೇತ್ರ ಲಾಭಗಳಲ್ಲಿದ್ದು ಬಲಶಾಲಿಯಾದರೆ ರವಿದೆಶೆಯು ಶುಭಕರವಾದ ಪಕ್ಷ ರಾಜಯೋಗವಿದ್ದರೆ ಪ್ರಬಲಾಧಿಕಾರ, ಲಾಭ, ಐಶ್ವರ್ಯ, ಪುತ್ರ ಸಂಪತ್ತು, ಧನ ), ಕೀರ್ತಿ, ವಿದ್ಯೆ, ಧರ್ಮ, ಉತ್ಸವ, ಶುಭಫಲಗಳು. ಪಾಪಸ್ಥಾನದಲ್ಲಿ ಬಲ ನನಾಗಿದ್ದರೆ ಮೇಲೆ ಹೇಳಿದ ಫಲಗಳಿಗೆ ವಿರುದ್ಧವಾದ ಕಷ್ಟಫಲಗಳಾಗುವವು. ಗುರು ಂದೊಡಗೂಡಿದ ರವಿಯಿಂದ ಪ್ರಭುಗಳ ಸಿಟ್ಟು, ಉದ್ಯೋಗಭಂಗ, ಚಂದ್ರನಿಂದ ್ತಾಭರಣ, ಭೋಜನ, ಶಯ್ಯಾಸೌಖ್ಯ. ಕುಜನಿಂದ ಸ್ತ್ರೀ ಪುತ್ರ ಕ್ಷೇತ್ರಾದಿ ಹಾನಿ. ್ರದೃಷ್ಟಿಯಿಂದ ನಟವಿಟಗಾಯಕರ ಸಂಬಂಧ. ಶನಿ ದೃಷ್ಟಿಯಿಂದ ನೀಚಪ್ರವೇಯ. ಧಿಪತಿಗೆ ಕೇಂದ್ರ ಕೋಣಾದಿ ಶುಭಸ್ಥಾನಗಳಿದ್ದರೆ ಧನಲಾಭ. ಮಾರಕವಲ್ಲಿದ್ದರೆ ತ್ಯು. ಅದಕ್ಕಾಗಿ ಸುವರ್ಣದಾನ, ರುದ್ರಜಪಗಳು ಶಾಂತಿ.



## ರವಿದಶಾ ಶನಿಭುಕ್ತಿ ೧೧ ತಿಂಗಳು ೧೨ ದಿನಕ್ಕೆ ಫಲ

ರವಿದಶಾ ಶನಿಭುಕ್ತಿಯಲ್ಲಿ ಶನಿಯು ಲಗ್ನಕ್ಕಿಂತಲೂ ತೃತೀಯ ಲಾಭಾದಿ ಶುಭ ಸ್ಥಾನಗಳಲ್ಲಿದ್ದರೆ ಕಾರ್ಯಸಿದ್ಧಿ, ವ್ಯವಹಾರದಲ್ಲಿ ವಿಶೇಷವಾಗಿ ಧನಲಾಭ, ಮನೆಯಲ್ಲಿ ಕಲ್ಯಾಣ, ನೀಲವಸ್ತು ಲಾಭ, ಎಮ್ಮೆಯನ್ನು ಕಟ್ಟುವನು. ಅದೇ ಶನಿ ಷಡ್ಬಲಾಧಿಕನಾದರೆ ಗಜಾಂತೈಶ್ವರ್ಯ, ಶನಿಯು ಸ್ಥಾನಾದಿ ಬಲಹೀನವಾದರೆ ಮನೆವು, ಚಿಂತೆ, ರೋಗ, ಕಲಹ, ಸ್ಥಾನಭಂಗ, ಬಂಧುಹಾನಿ, ಪಶುಹಾನಿ, ಕಾರ್ಯವಿಘ್ನ. ಭುಕ್ತಿಯ ಆದಿಯಲ್ಲಿ ಮೂರು ತಿಂಗಳು ಕಡು ಕಷ್ಟ, ಪಾಪಗ್ರಹದಿಂದ ಕೂಡಿದರೂ ನೋಡಲ್ಪಟ್ಟರೂ ದುರ್ಯೋಗವು ಇದ್ದರೆ ಆತ್ಮಹತ್ಯ, ದುರ್ಮರಣ. ಅದರಲ್ಲಿ ಸ್ವಲ್ಪ ಗ್ರಹಬಲವಿದ್ದರೆ ಪಾಪಜೀವನ, ವಾತಶೂಲೆ, ಭೇದಿರೋಗ, ಜ್ವರಾದಿ ಪೀಡೆ. ರವಿಯೊಡನೆ ಕೂಡಿದರೆ ಉದ್ಯೋಗ ಭಂಗ, ಪಿತೃವರ್ಗಕ್ಕೆ ಹಾನಿ. ಚಂದ್ರನೊಡನೆ ಕೂಡಿದರೆ ವ್ಯಾಧಿ. ಕುಜನಿಂದ ಅಪಜಯ. ಬುಧನಿಂದ ವ್ಯರ್ಥ ವಿದ್ಯಾಭ್ಯಾಸ. ಉತ್ತಮ ಗುರುವಿನಿಂದ ಕುಟುಂಬವರ್ಗ ಹಾನಿ, ಹುಚ್ಚು. ಶುಕ್ರನಿಂದ ಸ್ತ್ರೀ ಸಂಭೋಗ. ದಶಾಧಿಪತಿಗೆ ಶುಭಸ್ಥಾನದಲ್ಲಿದ್ದರೆ ಧನಧಾನ್ಯವೃದ್ಧಿ, ಕೃಷಿ ಕ್ಷೇತ್ರಾದಿ ಲಾಭ. ಶನಿ ಪೀಡೆಗೆ ತಿಲದಾನ ಕರೀ ಎಮ್ಮೆ ದಾನಗಳಿಂದ ಶಾಂತಿ.

—0—

## ರವಿದಶಾ ಬುಧಭುಕ್ತಿ ೧೦ ತಿಂಗಳು ೬ ದಿನಕ್ಕೆ ಫಲ

ರವಿದಶಾ ಬುಧಭುಕ್ತಿಯಲ್ಲಿ ಬುಧನು ಲಗ್ನಕ್ಕೆ ಕೇಂದ್ರ ತ್ರಿಕೋಣಗಳಲ್ಲಿಯಾಗಲಿ ಉಚ್ಚದಲ್ಲಾಗಲಿ ೩-೧೦ ರಲ್ಲಾಗಲಿ, ಶುಭಗ್ರಹಗಳಿಂದ ಒಡಗೂಡಿ ಇದ್ದರೆ ರಾಜಸ್ಥಾನದಲ್ಲಿ ಮಾನ, ವಿವಾಹ, ಸಂತಾನ ಸೌಖ್ಯ, ನೆಂಟರಿಗೆ ಉಪಕಾರ, ವಸ್ತ್ರ ಭೂಷಣಾಲಂಕಾರ, ದೇವತಾಗುರು ಸತ್ಕಾರ, ರತ್ನ ಸಂಗ್ರಹ, ಇಷ್ಟಸಿದ್ಧಿ ಆಗುವುದು. ಆದಿಯಲ್ಲಿಯೂ ಅಂತ್ಯದಲ್ಲಿಯೂ ಕಷ್ಟವೆಂದು ಬಲಹೀನತೆಯಲ್ಲಿ ತಿಳಿಯಬೇಕು. ಬುಧನಿಗೆ ಸಂಬಂಧಿಸಿದ ರವಿಯಿಂದ ದೇಹತಾಪ, ತಲೆ ತಿರುಗುವಿಕೆ. ಚಂದ್ರನಿಂದ ಗಾನ ಸುಖ, ವಿದ್ಯಾಲಾಭ. ಕುಜನಿಂದ ಪತ್ನಿ ಹಾನಿ, ಅನ್ನದ್ವೇಷ, ಕಣ್ಣು ಬೇನೆ. ಗುರುವಿನಿಂದ ಪುತ್ರವೃದ್ಧಿ, ರಾಜಮೂಲಕ ಧನಲಾಭ. ಶುಕ್ರನಿಂದ ವಾಹನ ಸೌಖ್ಯ, ಕಳತ್ರ ಭೋಗ ಶನಿಯಿಂದ ದಾಸಿ ಪಶುಲಾಭ. ಬುಧನು ದಶಾಧಿಪತಿಗೆ ಶುಭಸ್ಥಾನದಲ್ಲಿದ್ದರೆ ಶುಭ, ದುಷ್ಟಸ್ಥಾನದಲ್ಲಿರೆ ಅಶುಭ. ಮಾರಕದಲ್ಲಿದ್ದರೆ ಅಪಮೃತ್ಯು. ವಿಷ್ಣುಸಹಸ್ರನಾಮವೂ, ಬೆಳ್ಳಿಯ ಪ್ರತಿಮೆಯ ದಾನವೂ ಅದಕ್ಕೆ ಶಾಂತಿ ಉಂಟುಮಾಡುವದು.

## ರವಿದಶಾ ಕೇತುಭುಕ್ತಿ ೪ ತಿಂಗಳು ೬ ದಿನಕ್ಕೆ ಫಲ

ರವಿದಶಾ ಕೇತುಭುಕ್ತಿಯಲ್ಲಿ ಕೇತುವು ಲಗ್ನಕ್ಕೆ ಶುಭಸ್ಥಾನದಲ್ಲಿ ಶುಭನಿಂದ ಡಿದ್ದರೆ ಸತ್ಕರ್ಮ, ದೇವಕಾರ್ಯ, ಕೀರ್ತಿ, ಜಯ, ಕೆಂಪು ವಡವೆ, ನಷ್ಟದ್ರವ್ಯ ಭವಾಗುತ್ತೆ. ಲಗ್ನಾಧಿಪತಿಯಿಂದ ಕೂಡಿದರೆ ಭುಕ್ತಿಯ ಆದಿಯಲ್ಲಿ ಮಾತ್ರ ಖ್ಯ. ೬ರಲ್ಲಿ ಪಾಪಗ್ರಹಯುಕ್ತನಾದರೆ ವಾತರೋಗ, ಮೂತ್ರವ್ಯಾಧಿ. ದಶಾಧಿಪತಿ ಂದ ಕೂಡಿದರೆ ಪಿತೃರೋಗ, ಪರಸ್ಥಳ ಗಮನ, ಕುಟುಂಬ ಹಾನಿ. ಚಂದ್ರನಿಂದ ಡಿದರೆ ಭೋಜನ, ಶಯ್ಯಾಸುಖ, ಕುಟುಂಬ ಧನ ವೃದ್ಧಿ. ಕುಜನಿಂದ ಶತ್ರು ಧೆ. ಬುಧನಿಂದ ಕುಟುಂಬ ವೃದ್ಧಿ, ಭೂ ವಿದ್ಯಾಲಾಭ. ಗುರುವಿನಿಂದ ಆರೋಗ್ಯ, ತ್ರ ಸಂತೋಷ. ಶುಕ್ರನಿಂದ ಸ್ತ್ರೀ ಸೌಖ್ಯ, ಸಂಗೀತ. ಶನಿಯಿಂದ ವಾತರೋಗ, ಧಿಪತಿಗೆ ಶುಭಸ್ಥಾನದಲ್ಲಿ ಸಂತೋಷ, ದುಷ್ಟ ಸ್ಥಾನದಲ್ಲಿ ಸುಖ. ಮಾರಕದಲ್ಲಿ ಹಾರೋಗ. ಸೂರ್ಯನಮಸ್ಕಾರದಿಂದ ಶಾಂತಿ ಆಗುವದು.



## ರವಿದಶಾ ಶುಕ್ರಭುಕ್ತಿಯಲ್ಲಿ ೧೨ ತಿಂಗಳಿಗೆ ಫಲ

ರವಿದಶಾ ಶುಕ್ರಭುಕ್ತಿಯಲ್ಲಿ ಶುಕ್ರನು ಲಗ್ನಕ್ಕೆ ಕೇಂದ್ರ ತ್ರಿಕೋಣಾದಿ ಶುಭ ನಗಳಲ್ಲಿದ್ದರೆ ವಾಹನ ಲಾಭ, ರಾಜಪ್ರಸಾದ, ಕಲ್ಯಾಣಕಾರ್ಯ, ಪುತ್ರೋತ್ಸವ, ೋಗ್ಯ, ಧನವೃದ್ಧಿ, ಧನ ಪಶುಲಾಭ, ಸತ್ಕಾರ್ಯದಿಂದ ಸಂತೋಷ, ೬-೮-೧೨ರಲ್ಲಿ ಪಗ್ರಹದಿಂದ ಕೂಡಿದ್ದರೆ ಚಿಂತೆ, ಕಾರ್ಯಹಾನಿ, ಕಲಹ. ಸ್ತ್ರೀ ಭೂಮಿ ನಾಶ, ಕ್ಷಯ, ಬಂಧು ವಿಯೋಗ, ಕಳ್ಳರ ಕಾಟ. ರವಿಯಿಂದ ನೋಡಲ್ಪಟ್ಟರೆ ಶಸ್ತ್ರ ತ, ಆಹಾರ ಹಾನಿ, ಸ್ಥಾನ ಚಲನ. ಚಂದ್ರನಿಂದ ಕುಟುಂಬ ಸೌಖ್ಯ. ಕುಜನಿಂದ ತಪಾತಗಳು, ಜಗಳ ಜ್ಞಾತಿ ವಿರೋಧ. ಬುಧನಿಂದ ವಿದ್ಯಾವಿನೋದ, ಆಭರಣ ಭ, ಬಂಧು ಸತ್ಕಾರ ಗುರುವಿನಿಂದ ಹಗೆ ಹೆಚ್ಚು, ಆಲಸ್ಯ, ಕಾರ್ಯಹಾನಿ, ಸರ್ಕಾ ದಂಡ ತೆರುವಿಕೆ. ಶನಿಯಿಂದ ನೀಚಸೇವೆ, ಕೂಲಿಯವರೊಡನೆ ಜಗಳ, ಮನ ಪ. ದಶಾಧಿಪತಿಗೆ ಕೇಂದ್ರತ್ರಿಕೋಣ ತೃತೀಯ ಲಾಭಗಳಲ್ಲಿದ್ದರೆ ಪರಾಭವ, ಂಗಳ ಕಾರ್ಯ, ದಾರಾಪುತ್ರಾದಿ ಸೌಖ್ಯ, ರತ್ನ ಲಾಭ, ಪಶುವಾಹನಾದಿ ವೃದ್ಧಿ. ಧಿಪತಿಗೆ ೬-೮-೧೨ ರಲ್ಲಿ ಪಾಪಗ್ರಹಯುಕ್ತನಾದರೂ ನೀಚಗ್ರಹಯುಕ್ತನಾದರೂ ರ್ವೋಕ್ತ ಶುಭಫಲಕ್ಕೆ ವಿರುದ್ಧವಾದ ಅಶುಭ ಫಲವನ್ನು ಕೊಡುವನು. ಹಾಗಾ ೂ ಭುಕ್ತ್ಯಂತದವರಿಗೂ ಶುಭವಾಗಿಯೇ ಇದ್ದರೆ ಕಡೆಗೆ ಕಷ್ಟ ಪ್ರಾಪ್ತವಾಗುತ್ತದೆ. ರಕ ಸ್ಥಾನದಲ್ಲಿ ಅಷ್ಟಮಾಧಿಪತಿಯಿಂದ ಕೂಡಿದರೆ ಅಪಮೃತ್ಯುಭಯ. ರುದ್ರಾ ೇಕ, ಮೃತ್ಯುಂಜಯ ಜಪ, ಬಿಳೀ ಆಕಳನ್ನು ದಾನಮಾಡುವುದು ಇವುಗಳಿಂದ ಂತಿ ಉಂಟಾಗುವದು.

ಗ್ರಹಗಳ ಗೋಚಾರ ಫಲಗಳನ್ನೂ ಗ್ರಹಚಾರ ಫಲಗಳನ್ನೂ ದಶಾಭುಕ್ತಿ ಫಲ ದೊಡನೆ ಸೇರಿಸಿ ಹೇಳಬೇಕಾದ್ದು ಮುಖ್ಯ ಅಂಶ.

## ಚಂದ್ರದಶಾ ೧೦ ವರುಷಕ್ಕೆ ಫಲ

ದಶಾಧಿಪತಿಯಾದ ಚಂದ್ರನಿಗೆ ಸ್ಥಾನ ಬಲವು ಅಧಿಕವಾಗಿದ್ದರೆ ಜಾತಕನಿಗೆ ಆ ದೆಶೆಯಲ್ಲಿ ಧನ, ಸುಖ, ಕೀರ್ತಿ ವಿದ್ಯಾಲಾಭ, ಪುಣ್ಯಕಾರ್ಯ, ರಾಜ್ಯ ಮೂಲಕ ಭೂ ಲಾಭ, ಸ್ತ್ರೀ ರತ್ನ ಲಾಭ, ಕೃಷಿ, ವಾಣಿಜ್ಯ, ಭೋಜನ ಸುಖ, ಇತ್ಯಾದಿ ಶುಭ ಫಲಗ ಳಾಗುವವು. ಬಲಹೀನನಾಗಿದ್ದರೆ ಅರ್ಥಹಾನಿ, ಅಧಿಕಾರ ಭಂಗ, ಬಂಧುಹಾನಿ ಬಂಧು ವಿಯೋಗ, ಕೃಷಿಭಂಗ ಇತ್ಯಾದಿ ಕಷ್ಟಫಲಗಳಾಗುವವು. ದಿಗ್ಬಲವಿದ್ದರೆ ಪರ ದೇಶ ವಸ್ತು ಲಾಭ, ಪ್ರಭು ಮೈತ್ರಿ, ಸೇಟರಲ್ಲಿ ಪೂಜ್ಯತೆ, ಉತ್ತಮವಸ್ತು ಲಾಭ. ಕಾಲಬಲವಿದ್ದರೆ ವಾಹನ ಯೋಗ, ಕೃಷಿ, ಪಶುಧನಾದಾಯ. ನೈಸರ್ಗಿಕ ಬಲವಿದ್ದರೆ ನಿರಾಯಾಸದಿಂದ ಸುಖಲಾಭ. .ಕ್ರೂರಷಷ್ಠ್ಯಂಶದಲ್ಲಿದ್ದರೆ ಬಂಧು ವ್ಯಸನ, ಜಗಳ. ಮಧ್ಯಂಶದಲ್ಲಿದ್ದರೆ ಸಂತಾನ ವೃದ್ಧಿ, ಸುಫಲಗಳು, ಪರಾವತಾಂಶದಲ್ಲಿದ್ದರೆ ಧನಸುಖ. ಕೀರ್ತಿ, ಪುಣ್ಯ. ಕ್ರೂರ ದ್ರೇಕ್ಕಾಣದಲ್ಲಿದ್ದರೆ ರೋಗ, ಪೀಡೆ, ಹಿಂಸೆ. ಅಂತ್ಯಂಶದ ದಲ್ಲಿದ್ದರೆ ಪ್ರಭುತ್ವ ಕೀರ್ತಿ ಸಂತೋಷ. ಉಚ್ಚಾಂಶದಲ್ಲಿದ್ದರೆ ಸಾಧಾರಣ ಧನಲಾಭ, ಜಯ ಸ್ತ್ರೀಭೂಷಣ ಲಾಭ. ನೀಚದಲ್ಲಿದ್ದರೆ ಅರ್ಥಹಾನಿ, ಕದಾನ್ನ ಭೋಜನ, ನಿದ್ರೆ. ಅತಿ ನೀಚದಲ್ಲಿದ್ದರೆ ಕಣ್ಣು ಬೇನೆ, ಜಲದೋಷ, ಮೂತ್ರರೋಗ, ಶೀತಜ್ವರ. ಮೂಲ ತ್ರಿಕೋಣದಲ್ಲಿದ್ದರೆ ರಾಜ ಧನ, ಸಂತಾನ, ಭೂಲಾಭ, ಸುಖ. ಸ್ವಕ್ಷೇತ್ರದಲ್ಲಿದ್ದರೆ ಪ್ರಭುದ್ರವ್ಯಲಾಭ, ಸ್ತ್ರೀ ಸೌಖ್ಯ. ಅಧಿಕ ಶತ್ರುಕ್ಷೇತ್ರದಲ್ಲಿದ್ದರೆ ಕಲಹ ಮೂಲಕ ಧನ ಹಾನಿ, ಜಲಪ್ರಯಾಣ, ನಷ್ಟ, ಬಂಧು ಕ್ಲೇಶ ಇತ್ಯಾದಿ ಫಲಗಳುಂಟಾಗುತ್ತವೆ.



## ಚಂದ್ರದಶಾ ಚಂದ್ರಭುಕ್ತಿ ೧೦ ತಿಂಗಳಿಗೆ ಫಲ

ಚಂದ್ರದೆಶೆಯು ಚಂದ್ರಭುಕ್ತಿಯೊಳಗೆ ಶುಭ ಫಲಗಳನ್ನು ಕೊಡುವದು. ಆ ಚಂದ್ರನು ಕೇಂದ್ರ ತ್ರಿಕೋಣಗಳಲ್ಲಿದ್ದರೆ ಕೀರ್ತಿ ಲಾಭ, ಸಂಪತ್ತು. ಉಚ್ಚ ಸ್ವಕ್ಷೇತ್ರ ತ್ರಿಕೋಣಗಳಲ್ಲಿ ಸುಖ ಉಂಟಾಗುತ್ತದೆ, ಗುರುಯುಕ್ತನಾದರೆ ರಾಜ್ಯಲಾಭ. ದುಷ್ಟನಾದರೆ ಶುಭಗಳು. ಪೂರ್ಣಚಂದ್ರನಾದರೆ ಭಾಗ್ಯ. ೯-೧೦ನೇ ಅಧಿಪತಿಗ ಳಿಂದ ಕೂಡಿದರೆ ಐಶ್ವರ್ಯ. ಪಾಪಗ್ರಹಯುಕ್ತನಾದರೂ ೬-೮-೧೨ ನೀಚಸ್ಥಾನಗಳಲ್ಲಿ ದ್ದರೂ ಸ್ಥಾನಭ್ರಷ್ಟತೆ, ಮನಸ್ತಾಪ, ಧನಹಾನಿ, ಆ ರಾಶಿಗೆ ತಕ್ಕ ದಿಕ್ಕಿಗೆ ಪ್ರಯಾಣ

ುದ್ಧದಲ್ಲಿ ಅಪಜಯ, ಕ್ಷಯ, ಬಂಧು ಹಾನಿ, ಅಪಮೃತ್ಯು ಮಾರಕಸ್ಥಾನದಲ್ಲಿ ಷ್ಟಮಾಧಿಪತಿಯಿಂದ ಕೂಡಿದರೆ ಅಪಮೃತ್ಯು. ಅದರ ಪರಿಹಾರಕ್ಕಾಗಿ ಮೃತ್ಯುಂಜಯ ಪವನ್ನು ಮಾಡಿ ಬಿಳೀ ಆಕಳನ್ನೂ ಎಮ್ಮೆಯನ್ನೂ ದಾನ ಮಾಡಲು ಸುಖ ಂಟಾಗುವದು.

---

## ಚಂದ್ರದಶಾ ಕುಜಭುಕ್ತಿ ೭ ತಿಂಗಳಿಗೆ ಫಲ

ಚಂದ್ರದೆಶೆಯು ಕುಜಭುಕ್ತಿಯಲ್ಲಿ ಕುಜನು ಲಗ್ನಕ್ಕೆ ಕೇಂದ್ರ ತ್ರಿಕೋಣಗಳಲ್ಲಿ ನ್ಮ ಕಾಲದೊಳಗೆ ಇದ್ದವನಾದರೆ ಭಾಗ್ಯವೂ, ಪ್ರಭುಸನ್ಮಾನವೂ, ಕಾರ್ಯಸಿದ್ಧಿಯೂ ಗಲಾಭವೂ ಆಗುತ್ತೆ. ಉಚ್ಚ ಸ್ವಕ್ಷೇತ್ರಗಳಲ್ಲಿದ್ದರೆ ಸೋದರ ವರ್ಗ ವೃದ್ಧಿ, ಕೀರ್ತಿ ನಲಾಭ. ೬-೮-೧೨ ರಲ್ಲಿಯೂ ಪಾಪಗ್ರಹಯುಕ್ತನೂ ಆದರೆ ಕಾರ್ಯಭಂಗ, ರಾಜ ಯ. ನೀಚದಲ್ಲಿ ಚಿತ್ತವೈಕಲ್ಯ, ಪ್ರಭುದ್ವೇಷ, ಪ್ರಯಾಣ, ಕಲಹ, ಉಷ್ಣಜ್ವರ ುಭಗ್ರಹಯುಕ್ತನಾದರೂ ಶುಭ ದೃಷ್ಟಿಯಿದ್ದರೂ ಶುಭಸ್ಥಾನದಲ್ಲಿದ್ದರೂ ಪಶ ಾಹನ ಲಾಭ, ಸಂತಾನ ವೃದ್ಧಿ, ಧನ ಧಾನ್ಯ ಸಮೃದ್ಧಿ. ರವಿಯಿಂದ ಕೂಡಿದರೆ ಅಧಿಕಾರ ಾಭ. ಚಂದ್ರ ಸಂಬಂಧವಾದರೆ ವಿದ್ಯಾ ವ್ಯಾಸಂಗ, ಮಾತು ಗೆಲ್ಲುತ್ತೆ. ಗುರು ುಕ್ತನಾದರೆ ದ್ರವ್ಯಲಾಭ. ಶುಕ್ರಯುಕ್ತನಾದರೆ ನೆಂಟರು ಬರುವರು, ಅಶ್ವವಾಹನ ುವರ್ಣಲಾಭ. ಶನಿಯುಕ್ತನಾದರೆ ಸಂತಾನದಿಂದ ದೇಹಾಲಸ್ಯ, ಮರಣವಾರ್ತೆ, ೋಗಪೀಡೆ, ಆ ಕುಜನು ದಶಾಧಿಪತಿಯಾದ ಚಂದ್ರನಿಗೆ ೩-೧೧-೪-೭-೧೦-೫-೯ ಸ್ಥಾನಗಳಲ್ಲಿದ್ದರೆ ಕುಜಭುಕ್ತಿಯ ರಾಜಪ್ರಸಾದ, ಭ್ರಾತೃವರ್ಗ, ಶುಭಕಾರ್ಯ, ಲಹದಲ್ಲಿ ಜಯ, ಪಶುಧಾನ್ಯವೃದ್ಧಿ, ಕುಟುಂಬ ಸೌಖ್ಯ. ದಶಾಧಿಪತಿಗೆ ೬-೮-೧೨ ಲ್ಲಿ ಇದ್ದರೂ, ಪಾಪಗ್ರಹಯುಕ್ತನಾದರೂ ಕುಜಭುಕ್ತಿಯಲ್ಲಿ ಬಾಧುಹಾನಿ, ದೇಶಾಂ ರಗಮನ. ಜ್ಞಾತಿಕಲಹ, ಕ್ಷೇತ್ರನಾಶ, ಶತ್ರುವೃದ್ಧಿ, ಜನವಿರೋಧ. ಆ ಕುಜನು ೬-೮ ರಕ್ಕೆ ಅಧಿಪತಿಯಾದರೂ. ೨-೭ಕ್ಕೆ ಅಧಿಪತಿಯಾದರೂ ಅವುಗಳ ಅಧಿಪತ್ಯದಿಂದ ೂಡಿದ್ದರೂ ಅವುಗಳಲ್ಲಿದ್ದರೂ ಅಪಮೃತ್ಯು ಭಯವಾಗುತ್ತೆ. ಆ ದೋಷಕ್ಕೆ ಸೂರ್ಯ ಪ್ರಾರ್ಥನೆ, ಕುಮಾರಜಪ, ನಾಗದಾನಗಳು ಮಾಡುವದ್ದರಿಂದ ಪರಿಹಾರವು.

---

## ಚಂದ್ರದಶಾ ರಾಹುಭುಕ್ತಿ ೧೮ ತಿಂಗಳಿಗೆ ಫಲ

ಚಂದ್ರದಶಾ ರಾಹು ಭುಕ್ತಿಯಲ್ಲಿ ರಾಹುವು ಜನ್ಮಕಾಲದಲ್ಲಿ ಲಗ್ನಕ್ಕೆ ಕೇಂದ್ರ ತ್ರಿಕೋಣಗಳಲ್ಲಿದ್ದರೆ ಭುಕ್ತಿಯ ಆದಿಯಲ್ಲಿ ಸುಖವಾಗಿರುತ್ತೆ. ಬಳಿಕ ಕಳ್ಳರು, ಂಕಿ, ಪಶುಗಂಡ, ಬಂಧುಹಾನಿ, ಕಲಹ ಇತ್ಯಾದಿ ಕಷ್ಟಗಳುಂಟು. ಶುಭಗ್ರಹ ದೃಷ್ಟಿ

ಯಿದ್ದರೆ ಪ್ರಯಾಸದಿಂದ ಶುಭವಾಗುವದು. ತುರುಕರಿಂದ ಸನ್ಮಾನವಾಗುತ್ತೆ. ಅಷ್ಟ ಮಾಧಿಪತಿ ಸಂಬಂಧವಿದ್ದರೆ ದೇಹಾಲಸ್ಯ, ವಿಷಗಂಡ, ಶುಭದೃಷ್ಟಿಯಿದ್ದರೆ ದೋಷ ವಿಲ್ಲ. ೩-೧೧ ರಲ್ಲಿಯೂ ಶುಭಯುಕ್ತನಾಗಿಯೂ ಉಚ್ಚದಲ್ಲಿಯೂ ಇದ್ದರೆ ಬೇಗ ಆರೋಗ್ಯವಾಗುತ್ತೆ. ಕುಟುಂಬಕ್ಷೇಮ, ಉದ್ಯೋಗ, ಧನಲಾಭ, ಪಶುಲಾಭ, ದ್ರವ್ಯ ಲಾಭ, ಜಯ. ೬-೮-೧೨ ರಲ್ಲಿಯೂ ನೀಚದಲ್ಲಿಯೂ ಪಾಪಯುಕ್ತನಾಗಿಯೂ ಇದ್ದಗೆ ಮಿಶ್ರ ರೋಗಗಳಿಂದ ಬಹಳ ಸಂಕಟವಾದೀತು. ಸ್ಥಾನಭ್ರಂಶ, ಸಂತಾನ ಭಂಗ, ಕಲಹ ವಿಷಗಂಡ, ಮೂತ್ರ ರೋಗ. ರವಿಯಿಂದ ಕೂಡಿದರೆ ಸನ್ನಿಪಾತಜ್ವರ ಮಾನಭಂಗ. ಚಂದ್ರನಿಂದ ಕೂಡಿದರೆ ಮಾತೃವರ್ಗಕ್ಕೆ ಕಷ್ಟ. ಕುಜನಿಂದ ಕೂಡಿ ದರೆ ರಕ್ತರೋಗ, ಪಶು, ಭೂನಾಶ. ಬುಧಯುಕ್ತನಾದರೆ ನೆಂಟರು ಬರುವರು ಪುರಾಣ ಶ್ರವಣ, ವಸ್ತ್ರಾಭರಣ ಸಂಗ್ರಹ. ಗುರುಯುಕ್ತನಾದರೆ ಕುಟುಂಬಸೌಖ್ಯ, ಅರ್ಥ ಲಾಭ, ಸತ್ಕಾರ್ಯ. ಶುಕ್ರಯುಕ್ತನಾದರೆ ಹೊಸಮನೆ ಕೆಲಸ, ಒಡವೆ ಮಾಡಿಸುವಿಕೆ, ಭಂಗಾರ ರತ್ನ ಮುಂತಾದ್ದರ ಸಂಪಾದನೆ. ಶನಿಯುಕ್ತನಾದರೆ ವಿದೇಶ ಪ್ರಯಾಣ, ಪುತ್ರಪೀಡೆ, ರಾಜಮೂಲಕ ಧನವ್ಯಯ. ಆ ರಾಹುವು ಶುಭಸ್ಥಾನದಲ್ಲಿದ್ದರೆ ಶುಭಫಲ ದಶಾಧಿಪತಿಯಾದ ಚಂದ್ರನಿಗೆ ೬-೮-೧೨ರಲ್ಲಿ ಪಾಪಗ್ರಹಯುತನಾದರೆ ಭುಕ್ತಿಯ ಆದಿ ಭಾಗದಲ್ಲಿ ಆರು ತಿಂಗಳು ಬಹಳ ಕಷ್ಟವಾಗುತ್ತೆ. ಬಂಧು ಮರಣ, ಸ್ತ್ರೀಯರ ವಿವಾದ ಜೀವನಾಂಶ ವಿಚಾರ, ಧನಹಾನಿ, ಸಾಲ. ೨-೭ ರಲ್ಲಿದ್ದರೆ ಅಪಮೃತ್ಯು ಭಯ. ಈ ದೋಷಪರಿಹಾರಕ್ಕೆ ಮೃತ್ಯುಂಜಯ ಜಪವನ್ನು ಮಾಡಿ ಕರಿಯ ಮೇಕೆ ಮೊದ ಲಾದ ಐದು ದುರ್ದಾನಗಳನ್ನು ಮಾಡಿದರೆ ಆರೋಗ್ಯವುಂಟು.

---

## ಚಂದ್ರದಶಾ ಗುರುಭುಕ್ತಿ ೧೬ ತಿಂಗಳಿಗೆ ಫಲ

ಚಂದ್ರದೆಶೆಯ ಗುರುಭುಕ್ತಿಯಲ್ಲಿ ಗುರುವು ಜನ್ಮಕಾಲದೊಳು ಲಗ್ನಕ್ಕಾಗಲೀ ಚಂದ್ರನಿಗಾಗಲೀ ಕೇಂದ್ರ ತ್ರಿಕೋಣಗಳಲ್ಲಿಯೂ ೩-೧೧ ರಲ್ಲಿಯೂ ಉಚ್ಚದಲ್ಲಿಯೂ ಶುಭಗ್ರಹಯುಕ್ತನಾಗಿಯೂ ಇದ್ದರೆ ಅಂಥಾ ಗುರುವಿನ ಭುಕ್ತಿಯಲ್ಲಿ ರಾಜಪ್ರಸಾದ, ದೇವಾನುಗ್ರಹ, ವಿಶೇಷದ್ರವ್ಯ ಲಾಭ, ಉತ್ಸವಕಾರ್ಯ, ಸಂಕಲ್ಪಸಿದ್ಧಿ ಪುತ್ರಲಾಭ, ವಿದ್ಯಾಪ್ರಾಪ್ತಿ, ಪಶುಲಾಭ, ಕಲ್ಯಾಣಕಾರ್ಯ, ಸತ್ಸಹವಾಸ, ಸದಾಚಾರಸೌಖ್ಯ ಇತ್ಯಾದಿ ಶುಭ ಫಲಗಳಾಗುವವು. ದುಷ್ಟಸ್ಥಾನದಲ್ಲಿಯೂ ನೀಚದಲ್ಲಿಯೂ ಪಾಪ ಯುಕ್ತನಾದರೆ ಮೇಲೆ ಹೇಳಿದ ಫಲಗಳಿಗೆ ವಿರುದ್ಧವಾಗಿ ಕಷ್ಟಫಲಗಳಾಗುವವು. ಆದ ರಲ್ಲಿಯೂ ರವಿಸಂಬಂಧವಾದರೆ ಸನ್ನಿ ಪಾತಜ್ವರ, ಶತ್ರುವೃದ್ಧಿ ಯಾವಾಗಲೂ ಗುರು ಚಂದ್ರಯೋಗದಲ್ಲಿ ಸುಖಲಾಭ, ಕುಜ ಗುರು ಯೋಗಗಳಲ್ಲಿ ಕಲಹವುಂಟಾಗಿ ಅಪ

ು. ಗುರುವಿಗೆ ಕುಜಯೋಗವಾದರೆ ದ್ರವ್ಯಹಾನಿ, ಬುಧ ಸಂಬಂಧವಾದರೆ ಗಣಿತಾ
ರ, ಬುದ್ಧಿಕಾರ್ಯ, ಶುಕ್ರಯೋಗವಾದರೆ ಸ್ತ್ರೀಸೌಖ್ಯ, ಅಲಂಕಾರ. ಶನಿಯುಕ್ತ
ದರೆ ಧನಧಾನ್ಯಪುತ್ರಹಾನಿ, ನೀಚವಿರೋಧ, ದಶಾಧಿಪತಿಗೆ ೩-೧೧ ರಲ್ಲಿಯೂ
ದ್ರ ತ್ರಿಕೋಣಗಳಲ್ಲಿಯೂ ಇದ್ದರೆ ದೈವದೀಕ್ಷೆ, ಕಾರ್ಯಸಿದ್ಧಿ, ಪ್ರಭು ದರುಶನ್ಮ
ಶುಭವಾರ್ತೆ, ಧನಲಾಭ, ದುಷ್ಟಸ್ಥಾನದಲ್ಲಿ ಮಾರಕತ್ವ ಸಂಬಂಧವಾದರೆ ಅಪಮೃತ್ಯು,
ು. ಇದರ ಪರಿಹಾರಕ್ಕೋಸ್ಕರ ದುರ್ಗಾ ಜಪವನ್ನೂ ಲಕ್ಷ್ಮೀ ಜಪವನ್ನೂ
ಡಬೇಕು.

## ಚಂದ್ರದಶಾ ಶನಿಭುಕ್ತಿ ೧೯ ತಿಂಗಳಿಗೆ ಫಲ

ಚಂದ್ರದೆಶೆಯ ಶನಿಭುಕ್ತಿಯಲ್ಲಿ ಶನಿಯು ಜನ್ಮ ಕಾಲದಲಿ ಲಗ್ನಕ್ಕಾದರೂ ಚಂದ್ರ
ಾದರೂ ಶುಭಸ್ಥಾನಗಳಲ್ಲಿದ್ದರೆ ಪಡುವಲ ಕಡೆಗೆ ಪ್ರಯಾಣ, ಶೂದ್ರಪ್ರಭುಸನ್ಮಾನ
ತ್ಯವರ್ಗವಿಚಾರ, ಸಣ್ಣ ಅಧಿಕಾರ, ಪಶುವೃದ್ಧಿ, ತೀರ್ಥಸ್ನಾನ, ಪಾಪಸ್ಥಾನಗಳ
ದ್ದರೆ ನೀಚವಲ್ಲಿಯೂ ೬-೮-೧೨ರಲ್ಲಿಯೂ ಬಲಹೀನವಾದರೆ ಅನಿಷ್ಟಫಲ, ನೀಚಜನ
ರೋಧ, ನೀಚಕಾರ್ಯಪ್ರವರ್ತನೆ, ಕಷ್ಟಫಲ ರವಿ ಸಂಬಂಧವಾದರೆ ಉದ್ಯೋಗ
ನಿ. ಚಂದ್ರಸಂಬಂಧ ಸುಖೋಪಕರಣ ಲಾಭ. ಕುಜ ಸಂಬಂಧ ಭ್ರಾತನಾಶ
, ದಾಯಾದಿ ವ್ಯವಹಾರ, ಬುಧ ಸಂಬಂಧ ಬರವಣಿಗೆಯ ಕೆಲಸ, ಗುರು ಸಂಬಂಧ
ತ್ರಕಷ್ಟ, ಬುದ್ಧಿಭ್ರಮಣೆ. ಶುಕ್ರಸಂಬಂಧ ಸರ್ವಸೌಖ್ಯ. ದಶಾಧಿಪತಿಗೆ ಶುಭ
ನದಲ್ಲಿ ನೀಚದ್ರವ್ಯಲಾಭ, ಶೂದ್ರಪ್ರಭುಸನ್ಮಾನ, ದೃಷ್ಟಸ್ಥಾನದಲ್ಲಿ ಬಗೆಬಗೆ ಕಷ್ಟ
ರಕಸಂಬಂಧವಿದ್ದರೆ ಬದುಕುವದೇ ಪ್ರಯಾಸ. ಇದರ ಪರಿಹಾರಕ್ಕೆ ಕರೀ ಎಮ್ಮೆ
ಆಡು ದಾನ ಕೊಟ್ಟು, ವಿಷ್ಣು ಸಹಸ್ರನಾಮ ಜಪ ಮಾಡಿದರೆ ಪರಿಹಾರ
ಗುವದು.



## ಚಂದ್ರದಶಾ ಬುಧ ಭುಕ್ತಿ ೧೭ ತಿಂಗಳಿಗೆ ಫಲ

ಚಂದ್ರದೆಶೆಯ ಬುಧಭುಕ್ತಿಯಲ್ಲಿ ಶುಭಸ್ಥಾನ ಶುಭಸಂಬಂಧವಾದರೆ ವರ್ತಕ
ದಲ್ಲಿ ಧನಲಾಭ, ಜ್ಞಾನವೃದ್ಧಿ, ಅಲಂಕಾರ, ಸಂತಾನ, ಧನಧಾನ್ಯ ಸಮೃದ್ಧಿ.
-೧೨ ಭಾವನೀಚ ಸಂಬಂಧವಾದರೆ ಮಿತ್ರವಿರೋಧ, ಸೆರೆಮನೆ, ದಾಯಾದಿ ಕಲಹ
ಶಾಂತರ ಗಮನ. ಲಗ್ನಾಧಿಪತಿಯೊಡಗೂಡಿದರೆ ಆದಿಭಾಗದಲ್ಲಿ ಸೌಖ್ಯ, ಬಳಿಕ
ಶ್ರಫಲ. ರವಿಯೋಗದಿಂದ ಪಿತೃವರ್ಗವೃದ್ಧಿ, ಉದ್ಯೋಗ ಧನಲಾಭ. ಚಂದ್ರ
ೀಗದಿಂದ ಕಲ್ಯಾಣಕಾರ್ಯ, ಅಲಂಕಾರ ಲಾಭ. ಕುಜಯೋಗದಿಂದ ರಕ್ತಗುಲ್ಮ
ಕ್ಷಯ, ಸ್ಥಾನಭ್ರಂಶ. ಗುರುಯೋಗದಿಂದ ಸತ್ಕಾರ್ಯ, ಧನಲಾಭ. ಶುಕ್ರ

ಯೋಗದಿಂದ ಗೃಹಸೌಖ್ಯ. ಶನಿಯೋಗದಿಂದ ಮಾತೃಬಂಧು ಮರಣ. ದಶಾಧಿಪತಿಗೆ ಶುಭಸ್ಥಾನದಲ್ಲಿ ಧನಲಾಭ, ಮಾರಕಸ್ಥಾನದಲ್ಲಿ ಮೃತ್ಯುಭಯ. ಅದರ ಪರಿಹಾರಕ್ಕಾಗಿ ಲಕ್ಷ್ಮೀನಾರಾಯಣ ಜಪವನ್ನು ಮಾಡಿದರೆ ಶುಭ ಉಂಟಾಗುವದು.

---

## ಚಂದ್ರದಶಾ ಕೇತುಭುಕ್ತಿ ೭ ತಿಂಗಳಿಗೆ ಫಲ

ಚಂದ್ರದಶಾ ಕೇತುಭುಕ್ತಿಯಲ್ಲಿ ಕೇತುವು ಜನ್ಮ ಕಾಲದಲ್ಲಿ ಲಗ್ನಕ್ಕಾದರೂ ಚಂದ್ರನಿಗಾದರೂ ಶುಭಸ್ಥಾನದಲ್ಲಿ ಶುಭಸಂಬಂಧವಿದ್ದರೆ ಸ್ಥಾನಕ್ಕೂ ಗ್ರಹಸಂಬಂಧಕ್ಕೂ ತಕ್ಕ ಶುಭ ಫಲವನ್ನು ಕೊಡುತ್ತಾನೆ. ಪಾಪಸ್ಥಾನದಲ್ಲಿ ಪಾಪ ಸಂಬಂಧವಾದರೆ ಅದಕ್ಕೆ ತಕ್ಕ ಫಲವನ್ನು ಕೊಡುತ್ತಾನೆ. ಹಾಗಲ್ಲದೆ ಪಾಪಸ್ಥಾನದಲ್ಲಿ ಪಾಪ ಸಂಬಂಧವಾದರೆ ಅದಕ್ಕೆ ತಕ್ಕ ಪಾಪಫಲವನ್ನು ಕೊಡುತ್ತಾನೆ. ರವಿಸಂಬಂಧ ವಿಷಶಸ್ತ್ರಗಂಡ, ಚಂದ್ರ ಸಂಬಂಧ ಮಾತೃವರ್ಗ ಹಾನಿ. ಕುಜಸಂಬಂಧ ಅಗ್ನಿ, ಶಸ್ತ್ರ, ಜ್ವರಗಂಡ. ಬುಧ ಸಂಬಂಧ ವೈದ್ಯಮೂಲಕ ಧನಲಾಭ. ಗುರು ಸಂಬಂಧ ಪುತ್ರೋತ್ಸವ. ಶುಕ್ರ ಸಂಬಂಧ ಕುಟುಂಬ ಹಾನಿ. ಶನಿಸಂಬಂಧ ದೇಹಾಲಸ್ಯ. ದಶಾಧಿಪತಿಗೆ ಶುಭಸ್ಥಾನದಲ್ಲಿ ಶುಭಕಾರ್ಯ. ಮಾರಕಸ್ಥಾನದಲ್ಲಿ ಮೃತ್ಯುಭಯ. ಇದಕ್ಕೆ ಛಾಗದಾನದಿಂದ ಪರಿಹಾರವು.

---

## ಚಂದ್ರದಶಾ ಶುಕ್ರಭುಕ್ತಿ ೨೦ ತಿಂಗಳಿಗೆ ಫಲ

ಚಂದ್ರದಶಾ ಶುಕ್ರಭುಕ್ತಿಯಲ್ಲಿ ಶುಕ್ರನು ಜನ್ಮ ಕಾಲದಲ್ಲಿ ಲಗ್ನಕ್ಕಾದರೂ ಚಂದ್ರನಿಗಾದರೂ ಕೇಂದ್ರ ತ್ರಿಕೋಣಗಳಲ್ಲಿ ೩-೧೧ ರಲ್ಲಿ ಉಚ್ಚದಲ್ಲಿ ಶುಭಸಂಬಂಧವಾಗಿದ್ದರೆ ಶುಕ್ರಭುಕ್ತಿಯಲ್ಲಿ ಕಲ್ಯಾಣಕಾರ್ಯ, ಶುಭಪ್ರಯಾಣ, ವಾಹನ ಸೌಖ್ಯ, ರತ್ನಾಭರಣ ಲಾಭ, ದ್ರವ್ಯ ಪ್ರಾಪ್ತಿ, ಮೃಷ್ಟಾನ್ನ ಭೋಜನ, ಪುತ್ರೋತ್ಸವ, ರಾಜಾಶ್ರಯ, ಕಾರ್ಯ ಸಿದ್ಧಿ, ಗಂಧಪುಷ್ಪ, ಸ್ತ್ರೀಸೌಖ್ಯ, ಸಂಗೀತ ಕ್ರೀಡಾವಿನೋದ, ನೃತ್ಯ, ಸಮಾಗಮ, ವಿನೋದಕಥೆ, ಉಲ್ಲಾಸ, ವ್ಯಾಪಾರ. ದಶಾಧಿಪತಿಯಿಂದ ಕೂಡಿದರೆ ಸಂತೋಷ. ನೀಚನಾಗಿ ಅಸ್ತಂಗತನಾಗಿ ಪಾಪಗ್ರಹಯುತನಾದರೆ ನೀಚಭೋಗ, ಮೇಹಜಾಡ್ಯ, ಕಳತ್ರಹಾನಿ, ತಲೆನೋವು, ಪಶುಗಂಡ, ಜ್ವರ, ರಾಜವಿರೋಧ. ಆ ಶುಕ್ರನು ಬಲಾಧಿಕನಾಗಿ ಶುಭನಾದರೆ ಮಹಾಯೋಗ. ಲಗ್ನಕ್ಕೆ ೬-೮-೧೨ ರಲ್ಲಿ ಅಥವಾ ನೀಚದಲ್ಲಿದ್ದರೆ ಕುಟುಂಬ ಹಾನಿ, ಅಪವಾದ. ಬಂಧುವಿರೋಧ, ನೀಚಸ್ತ್ರೀ ಕಲಹ. ರವಿಯೊಡಗೂಡಿದರೂ ನೋಡಲ್ಪಟ್ಟರೂ ಉದ್ಯೋಗಭಂಗ, ಚಂದ್ರನಿಂದ ಬಿಳೀ ಕುದುರೆಯ ಲಾಭ ಬೆಳ್ಳೀನಾಣ್ಯ, ಕುಜನಿಂದ ದಾಯಾದಿ ವ್ಯಾಜ್ಯ. ಬುಧನಿಂದ ಕುಟುಂಬಸೌಖ್ಯ.

ಧನಲಾಭ, ಗುರುವಿನಿಂದ ಆರೋಗ್ಯ, ಸಂತಾನ. ಶನಿಯಿಂದ ಭೃತ್ಯಕಲಹ, ನಾಶ. ದಶಾಧಿಪತಿಗೆ ಶುಭಸ್ಥಾನದಲ್ಲಿ ಮಹದೈಶ್ವರ್ಯ, ಪಾಪಸ್ಥಾನದಲ್ಲಿ ಸ್ತ್ರೀಹಾನಿ ರಕಸಂಬಂಧದಲ್ಲಿ ಮೃತ್ಯುಭಯ. ಈ ದೋಷಪರಿಹಾರಕ್ಕೆ ರುದ್ರಮಂತ್ರ ಜಪ ನ್ನು ಮಾಡಿ ಬಿಳಿಯ ಆಕಳನ್ನೂ, ಎಮ್ಮೆಯನ್ನೂ ದಾನಮಾಡಲು ಪರಿಹಾರವುಂಟು.

---

## ಚಂದ್ರದಶಾ ರವಿಭುಕ್ತಿ ೬ ತಿಂಗಳಿಗೆ ಫಲ

ಚಂದ್ರದಶಾ ರವಿಭುಕ್ತಿಯಲ್ಲಿ ರವಿಯು ಜನ್ಮಕಾಲದಲ್ಲಿ ಮೇಷ.ಸಿಂಹಗಳಲ್ಲಿಯೂ ಕ್ಕೆ ಅಥವಾ ಚಂದ್ರನಿಗೆ ಕೇಂದ್ರ ತ್ರಿಕೋಣಗಳಲ್ಲಿಯೂ ಅಥವಾ ೩ ರಿಲ್ಲಿಯೂ ವ ರಾಶಿಯಲ್ಲಾದರೂ ಸಿಂಹರಾಶಿಯಲ್ಲಾದರೂ ಇದ್ದರೆ ನಷ್ಟದ್ರವ್ಯ ಲಾಭ, ನಷ್ಟ ಪ್ರಾಪ್ತಿ, ಕಲ್ಯಾಣಕಾರ್ಯ. ಮಿತ್ರಲಾಭ, ರಾಜಪ್ರಸಾದ, ಭೂಲಾಭ, ಲಕ್ಷ್ಮೀ ಕ್ಷ ಇತ್ಯಾದಿ ಶುಭಫಲವಾದರೂ ಭುಕ್ತಿಯ ಕಡೇ ಭಾಗದಲ್ಲಿ ಕೊಂಚ ದೇಹಾಲಸ್ಯ ದರೂ ಕೊರತೆ. ಲಗ್ನಕ್ಕೆ ದುಷ್ಟಸ್ಥಾನದಲ್ಲಿ ಪಾಪಸಂಬಂಧವಾದರೆ ಪಿತೃವರ್ಗಹಾನಿ ವಿರೋಧ, ಅಧಿಕಾರ ಭಂಗ, ಶತ್ರುಪೀಡೆ, ದೇಹಾರೋಗ್ಯ, ಪಶುಹಾನಿ. ಗುರುಜನ ಣ. ಚಂದ್ರಯೋಗವಾದರೆ ಮಾತೃವರ್ಗಹಾನಿ, ನೇತ್ರಶಿರೋರೋಗ. ಕುಜ ಗದಿಂದ ಜ್ಞಾತಿ ಕಲಹ, ಕ್ಷೇತ್ರಹಾನಿ. ಬುಧಯೋಗದಿಂದ ಬಂಧುಸೌಖ್ಯ, ದಿ ಕ್ಷೇತ್ರಲಾಭ, ಮತಶ್ರದ್ಧೆ. ಗುರುಯೋಗದಿಂದ ದ್ರವ್ಯಲಾಭ, ಆರೋಗ್ಯ, . ಶುಕ್ರಯೋಗದಿಂದ ಸ್ತ್ರೀ ಸೌಖ್ಯ, ರಜತದ್ರವ್ಯ ಲಾಭ. ಶನಿಯೋಗದಿಂದ ಕಷ್ಟಗಳು ದಶಾಧಿಪತಿಗೆ ಶುಭಸ್ಥಾನದಲ್ಲಿ ಶುಭಫಲ, ಪಾಪಸ್ಥಾನದಲ್ಲಿ ಪಾಪಫಲ ರಕಸ್ಥಾನದಲ್ಲಿ ಸಂಬಂಧವಿದ್ದರೆ ಮೃತ್ಯುಭಯ. ಇದಕ್ಕೆ ದುರ್ಗಾಜಪ ಗೋದಾನ ದ ಸೌಖ್ಯವಾದೀತು.

---

## ಕುಜದಶಾ ೭ ವರ್ಷಕ್ಕೆ ಫಲ

ಕುಜದೆಶೆಯಲ್ಲಿ ಆದಿಯೊಳು ಕಷ್ಟವನ್ನೂ ಧನ ಮಾನಹಾನಿಯನ್ನೂ ಮಧ್ಯದಲ್ಲಿ ರಾಗ್ನಿ ರಾಜಶತ್ರುಭಯವನ್ನೂ, ಕಡೆಯಲ್ಲಿ ಸೋದರ ಕಷ್ಟ, ಆತ್ಮಬಂಧು ಹಾನಿ, ಗಾದಿಗಳನ್ನೂ ಹೀಗೆ ಕಷ್ಟಫಲವನ್ನೇ ಹೇಳಬೇಕು. ಗೋಚಾರದಲ್ಲಿಯೂ ಕ್ರೂರ ದ್ದರೆ ಕಷ್ಟವು ಹೆಚ್ಚುತ್ತೆ ಕುಜನು ಅತ್ಯುಚ್ಚದಲ್ಲಿದ್ದರೆ ಭೂಸಮೃದ್ಧಿ ಲಾಭವೂ, ದ್ಧದಲ್ಲಿ ಜಯವೂ, ಬಂಧು ಸನ್ಮಾನವೂ ಉಂಟು. ಸಾಧಾರಣವಾಗಿ ಉಚ್ಚದಲ್ಲಿ ರೆ ಪ್ರಭುಗಳ ಸ್ನೇಹ, ವಾಹನಸೌಖ್ಯ, ಧನಲಾಭ. ನೀಚದಲ್ಲಿದ್ದರೆ ಜನವಿರೋಧ

ಭೋಜನಸೌಖ್ಯ ಹಾನಿ, ನಷ್ಟ. ಮೂಲ ತ್ರಿಕೋಣದಲ್ಲಿದ್ದರೆ ಆಭರಣ ಲಾಭ, ದೇಹ ಸೌಖ್ಯ, ಕೃಷಿಲಾಭ. ಸ್ವಕ್ಷೇತ್ರದಲ್ಲಿದ್ದರೆ ಕಲಹ, ದುಃಖ, ಜನವಿರೋಧ, ಧನಾದಿ ಹಾನಿ, ಆದಿ ಶತ್ರುಸ್ಥಾನದಲ್ಲಿ ಇನ್ನೂ ಕಷ್ಟ ಹೆಚ್ಚು. ಮಿತ್ರರಾಶಿಯಲ್ಲಿದ್ದರೆ ಕಷ್ಟ ನಷ್ಟಗಳು ಇಲ್ಲ. ಅತಿ ಮಿತ್ರರಾಶಿಯಲ್ಲಿ ದೇಶಾಂತರದಿಂದ ಧನಲಾಭ. ಸಮಗ್ರಹದ ರಾಶಿಯಲ್ಲಿದ್ದರೆ ಬಾಧುವಿರೋಧ, ಧನಲಾಭ, ಅಗ್ನಿಭಯ. ನೀಚಗ್ರಹದೊಡನೆ ಸೇರಿ ದ್ದರೆ ಪರಾನ್ನ ಭೋಜನ, ಕಷ್ಟನಷ್ಟಗಳು, ಕೊಂಚ ಸುಖ. ಉಚ್ಚಗ್ರಹದೊಡನೆ ಕೂಡಿ ದ್ದರೆ ಹೊರಗೆ ಪೂಜ್ಯತೆ, ಕುಟುಂಬದಲ್ಲಿ ಪೀಡೆ. ಆ ಕುಜನು ಪಾಪಗ್ರಹದೊಡನೆ ಕೂಡಿ ದವನಾಗಿದ್ದರೆ ಕೆಟ್ಟ ಕೆಲಸವನ್ನು ಮಾಡುವನು, ಮೋಸಗಾರನಾಗುವನು. ಶುಭಗ್ರಹ ದೊಡನೆ ಸೇರಿದರೆ ಸುಖ ಕಡಿಮೆ, ಜಗಳವಾಡಿ ಗೆಲ್ಲುವನು, ಪರಸ್ಥಳ ತಿರುಗುವನು ಶುಭಗ್ರಹದಿಂದ ನೋಡಲ್ಪಟ್ಟರೆ ಶುಭವಾಗುವದು. ಪಾಪಗ್ರಹದಿಂದ ನೋಡಲ್ಪಟ್ಟರೆ ಕ್ರೂರಫಲಗಳಾಗುವುವು. ಆ ಕುಜನು ಕೇಂದ್ರದಲ್ಲಿದ್ದರೆ ಪರಸ್ಥಳ ಪ್ರಯಾಣ, ಕಳ್ಳರ ಕಾಟ, ವಿಷಜಂತುಭಯ. ಉಚ್ಚಾಂಶದಲ್ಲಿದ್ದರೆ ದಾಸೀಗಮನ, ನೀಚಾಂಶದಲ್ಲಿ ಕೆಲಸ ಕೇಡು, ಶಿಕ್ಷೆಗೆ ಗುರಿಯಾಗುವನು. ಆ ಕುಜನಿಗೆ ಸ್ಥಾನಬಲವಿದ್ದರೆ ಸ್ಥಳ ದೊರೆಯುತ್ತೆ ಉದ್ಯೋಗಲಾಲ್ಲ. ಸ್ಥಾನಬಲವಿಲ್ಲದಿದ್ದರೆ ಅಗಚಾಟಲು. ದಶಾಧಿಪತಿಯಾದ ಕುಜನಿಗೆ ದಿಗ್ಬಲವಿದ್ದರೆ ಸರಕಾರದಿಂದ ಧನಲಾಭ, ಕಾಲಬಲವಿದ್ದರೆ ಕೃಷಿ ವಾಹನ ವಸ್ತ್ರಲಾಭ. ನೈಸರ್ಗಿಕ ಬಲವಿದ್ದರೆ ಸ್ಥಾನ ಧನಲಾಭ, ಪಿತ್ತವಿಕಾರ. ವಕ್ರಗತಿಯಾಗಿದ್ದರೆ ಅಧಿಕಾರ ಭಂಗ. ಕ್ರೂರಷಷ್ಠ್ಯಾಂಶದಲ್ಲಿದ್ದರೆ ಬಂದೀಖಾನೆ. ಸೌಮ್ಯಷಷ್ಠ್ಯಾಂಶದಲ್ಲಿದ್ದರೆ ಸಂತೋಷ ಕಾರ್ಯಗಳಾಗುವುವು. ಪಾರಾವತಾದಿ ಉತ್ತಮಾಂಶಗಳಲ್ಲಿದ್ದರೆ ಮಹಾ ಸಂತೋಷ ಉಂಟಾಗುವುವು. ಕ್ರೂರದ್ರೇಕ್ಕಾಣದಲ್ಲಿದ್ದರೆ ಖೂನಿ, ದೊಂಬಿ ಮುಂತಾದ ಕೆಟ್ಟ ಕೃತ್ಯದ ತೊಂದರೆಗಳಲ್ಲಿ ಸಿಕ್ಕುವನು. ಉಚ್ಚರಾಶಿಯಲ್ಲಿ ನೀಚಾಂಶದೊಳಗಿದ್ದರೆ ಅವನ ದಶಾಪಾಕ ಕಾಲದಲ್ಲಿ ಸೋದರ ಹಾನಿ, ವಿಷಗಂಡ, ಅಗ್ನಿಗಂಡ. ನೀಚರಾಶಿಯಲ್ಲಿ ಉಚ್ಚಾಂಶದೊಳಗಿದ್ದರೆ ಕಲ್ಯಾಣಕಾರ್ಯ, ಧನಲಾಭ ಈ ಮೇರೆ ಫಲಗಳುಂಟಾಗುವವು

---

## ಕುಜದಶಾ ಕುಜಭುಕ್ತಿ ೪ ತಿಂಗಳು ೩೭ ದಿನಕ್ಕೆ ಫಲ

ಕುಜದಶಾ ಕುಜಭುಕ್ತಿಯಲ್ಲಿ ಆ ಕುಜನು ಕೇಂದ್ರತ್ರಿಕೋಣಗಳಲ್ಲಿ ಜನ್ಮಕಾಲ ದೊಳಗಿದ್ದವನಾಗಿ ಲಗ್ನಾಧಿಪತಿಯಿಂದ ಕೂಡಿಯಿದ್ದರೆ ಸ್ವಲ್ಪ ದೇಹಾಲಸ್ಯ ಉಂಟಾಗು ವದು. ಆದಾಗ್ಯೂ ಪುತ್ರಸೌಖ್ಯ, ಧನಧಾನ್ಯವೃದ್ಧಿ. ಲಗ್ನಕ್ಕೆ೬-೮-೧೨ ಪಾಪರಾಶಿಗಳಾಗಿ ಅಲ್ಲಿ ಕುಜನು ನೀಚನಾಗಿದ್ದರೆ ಅವನ ದೆಶೆಯೊಳಗೆ ಅವನ ಭುಕ್ತಿಯೇ ಬಂದಾಗ ಕಾಯಿಲೆ, ನಷ್ಟ, ಬಂಧುಮರಣ ಉಂಟುಮಾಡುವನು. ಆ ಕುಜನು ರವಿಯಿಂದ ನೋಡಲ್ಪಟ್ಟಿದ್ದರೆ ತಾಪಜ್ವರಾದಿ ಕಷ್ಟಗಳು ಚಂದ್ರದೃಷ್ಟಿಯಿದ್ದರೆ ಉತ್ತಮ ಫಲ. ಬುಧದೃಷ್ಟಿಯಿಂದ ವರ್ತಕತನ, ವಿದ್ಯಾವ್ಯಾಸಂಗ, ಗುರುದೃಷ್ಟಿ ಅನಾರೋಗ್ಯ, ಸುಖ

ನಗಳು. ಶುಕ್ರದೃಷ್ಟಿಯಿಂದ ದೇಹಸುಖ, ಸಂತೋಷ. ಶನಿದೃಷ್ಟಿಯಿಂದ ವಾತೋಷ್ಣ ೩, ಕಲಹ ೨-೭ಕ್ಕೆ ಅಧಿಪತಿಯಾದರೆ ಮೃತ್ಯುಭಯ. ಇದರ ಪರಿಹಾರಕ್ಕೆ ್ರಹ್ಮಣ್ಯ ಜಪಮಾಡಿ ಹೋರಿಕರುವನ್ನು ದಾನ ಕೊಟ್ಟರೆ ಪರಿಹಾರವಾದೀತು.

## ಕುಜದಶಾ ರಾಹುಭುಕ್ತಿ ೧೨ ತಿಂಗಳು ೧೮ ದಿನಕ್ಕೆ ಫಲ

ಕುಜದಶಾ ರಾಹುಭುಕ್ತಿಯಲ್ಲಿ ರಾಹು ಲಗ್ನಕ್ಕೆ ೧-೪-೫-೭-೧೦-೧೧ ಈ ರಾಶಿ ೨ ಬಲವಂತನಾಗಿದ್ದರೆ ಕ್ರೂರದೇವತಾಪೂಜೆ, ರಂಡೆ ಸಂಭೋಗ ಕೆಲಸ ಕೈಗೂಡು ಜಯ, ಆರೋಗ್ಯ ತೋರಿ ಮಧ್ಯ ಕಾಲಧಲ್ಲಿ ಸ್ವಲ್ಪ ಕಷ್ಟವಾಗಿ ನಂತರ ದಾಗುತ್ತೆ, ತೀರ್ಥಯಾತ್ರೆ ಲಭಿಸುತ್ತೆ. ೬-೮-೧೨ ರಲ್ಲಿದ್ದರೆ ಹುಣ್ಣು ಏಳುತ್ತೆ. ಗಂಡ, ವಾತಪಿತ್ತವೃದ್ಧಿ. ಚಂದ್ರದೃಷ್ಟಿಯಿದ್ದರೆ ಮಾತೃವರ್ಗಭಯ. ಕುಜದೃಷ್ಟಿ ದ ಚರ್ಮರೋಗ, ಮನಸ್ಸಿಗೆ ಸಂಕಟ. ಬುಧ ನೋಡಿದರೆ ಹಾದರತನ. ಗುರು ಡಿದರೆ ವಾಹನ ಲಾಭ; ಬಸುರೀಭೋಗ, ವಿದ್ಯಾಲಾಭ. ಶುಕ್ರ ನೋಡಿದರೆ ವಸ್ತ್ರ ನಲಾಭ, ಕಲ್ಯಾಣ ಕಾರ್ಯ. ಶನಿ ನೋಡಿದರೆ ದೊಡ್ಡವರ ಭಯ, ಕಡುಕಷ್ಟಗಳು ಹು ಕುಜನಿಗೆ ಅಂದರೆ ದಶಾಧಿಪತಿಗೆ ಕೇಂದ್ರ ತ್ರಿಕೋಣಗಳಲ್ಲಿ ೩-೧೧ರಲ್ಲಿ ಆಗಲಿ ರೆ ಹೆರವರ ಆಪಕಾರ, ಆದಿಯಲ್ಲಿ ಕಷ್ಟ, ಬಳಿಕ ಸೌಕ್ಯ, ಮೂಡಲಿಗೆ ಪ್ರಯಾಣ, ರ್ಯಸಿದ್ಧಿ ದಶಾಧಿಪತಿಗೆ ೬-೮-೧೨ ರಲ್ಲಿ ಪಾಪಗ್ರಹದೊಡಗೂಡಿ ರಾಹುವಿದ್ದರೆ ೃವರ್ಗಮರಣ, ಕಾರ್ಯಹಾನಿ. ೨-೭ ರಲ್ಲಿದ್ದರೆ ಅಪಮೃತ್ಯುಗಂಡ, ಅದರ ಾರಕ್ಕೋಸ್ಕರ ಮೃತ್ಯುಂಜಯ ಜಪವನ್ನು ಮಾಡಿ ಕರಿಯ ಆಕಳನ್ನು ್ರಯನ್ನೂ ದಾನಕೊಟ್ಟರೆ ಸುಖವಾಗುತ್ತೆ.

## ಕುಜದಶಾ ಗುರುಭುಕ್ತಿ ೧೧ ತಿಂಗಳು ೬ ದಿನಕ್ಕೆ ಫಲ

ಕುಜದಶಾ ಗುರುಭುಕ್ತಿಯಲ್ಲಿ ಆ ಗುರುವು ಲಗ್ನಕ್ಕೆ ೪-೭-೧೦-೩-೫-೯-೧೧ರಲ್ಲಿ ಗ್ರಹದಿಂದ ಕೂಡಿಯಿದ್ದರೂ ಸ್ವಕ್ಷೇತ್ರದಲ್ಲಿ ಇದ್ದರೂ ತನ್ನ ಉಚ್ಚದಲ್ಲಿ ಇದ್ದರೂ ಂಶದಲ್ಲಾದರೂ ಧನುರ್ಮೀನಾಂಶದಲ್ಲಾದರೂ ಲಗ್ನದಲ್ಲಾದರೂ ಇದ್ದರೂ ಅಧಿ ಳ ಅನುಕೂಲದಿಂದ ವಾಹನಲಾಭ, ನೆಂಟರವೃದ್ಧಿ ಆಭರಣ ಸಮೃದ್ಧಿಯಾ ಅವನ ಪಾಪಕಾಲದಲ್ಲಿ ಮಗ ಹುಟ್ಟುತ್ತಾನೆ, ವ್ಯಾಜ್ಯ ಗೆಲ್ಲುತ್ತೆ, ಪ್ರಯತ್ನ ದ ಕೆಲಸ ಕೈಗೂಡಿ ಬರುತ್ತೆ, ಉತ್ಸವಕಾರ್ಯವಾಗುವುದು. ಆ ಗುರುವು ದಶಾಧಿ ಾದ ಕುಜನೊಡಗೂಡಿದರೆ ಪಶುವೃದ್ಧಿ ಸಂಪತ್ತು, ಹೊಸದಾಗಿ ಪ್ರಭುದರುಶನ ತ್ತೆ. ಆ ಗುರುವು ಸ್ಥಾನಾದಿ ಬಲಹೀನನಾದರೆ ಮೂತ್ರರೋಗ, ಕದಾನ್ನ ಸನ, ಕಡುಕಷ್ಟಗಳು. ಸೂರ್ಯದೃಷ್ಟಿಯಿದ್ದರೆ ರಾಜಮೂಲಕ ಧನಲಾಭ, ಪಿತ್ರ

ದ್ರವ್ಯ ಪ್ರಾಪ್ತಿ. ಚಂದ್ರ ದೃಷ್ಟಿ ಶುಭ. ಕುಜ ದೃಷ್ಟಿ ಕೇಡು. ಬುಧ ದೃಷ್ಟಿ ಸೋದರ ಮಾವ ಮುಂತಾದವರಿಗೆ ಲಾಭ. ಶುಕ್ರ ದೃಷ್ಟಿ ಒಡವೆ ಹೆಚ್ಚುತ್ತೆ, ಭಾಗ್ಯ ಲಾಭ. ಶನಿ ನೋಡಿದರೆ ಎಲ್ಲವೂ ಹಾಳು. ಆ ಗುರುವು ಕುಜನಿಗೆ ಶುಭಸ್ಥಾನದಲ್ಲಿದ್ದರೆ ಪುತ್ರೋತ್ಸವ, ಸನ್ಮಾನ, ದ್ರವ್ಯಲಾಭ, ಗರ್ಭಿಣಿ ಸಂಭೋಗ ಅಥವಾ ಸ್ವಪ್ನ ವಿಕಾರವಾಗುತ್ತೆ. ಕುಜನಿಗೆ ೬-೮-೧೨ ರಲ್ಲಿ ಪಾಪಗ್ರಹದಿಂದ ಕೂಡಿದ್ದರೆ ದುರಾಲೋಚನೆ. ಶತ್ರುತ್ವ, ಚಪಲಯೋಚನೆ. ಭುಕ್ತಿಯ ಆದಿಭಾಗದಲ್ಲಿ ಮಾತ್ರ ಶುಭಫಲವಾಗುತ್ತೆ, ಮಿಕ್ಕಾದಾಗ ಯಾವದಾದರೂ ಹಾನಿಯಾದ ಸಮಾಚಾರವೇ ಉಂಟಾಗುತ್ತೆ. ರಾಹುವಿನೊಡಗೂಡಿದರೆ ವಿಷಗಂಡ, ಕಳ್ಳರಕಾಟ, ಬೆಂಕಿಯ ಭಯ. ೨-೭ರಲ್ಲಿದ್ದರೆ ಜ್ವರಗಾಡ. ಈ ಪರಿಹಾರಕ್ಕೆ ಶಿವಸಹಸ್ರನಾಮ ಜಪಮಾಡಿ ಭಂಗಾರವನ್ನು ದಾನವಾಗಿ ಕೊಡಬೇಕು.

---

## ಕುಜದಶಾ ಶನಿಭುಕ್ತಿ ೧೩ ತಿಂಗಳು ೯ ದಿನಕ್ಕೆ ಫಲ

ಕುಜದಶಾ ಶನಿಭುಕ್ತಿಯಲ್ಲಿ ಶನಿಯು ಲಗ್ನಕ್ಕೆ ಶುಭಸ್ಥಾನಗಳಲ್ಲಿ ಇದ್ದರೆ ಸುಖಕ್ಕೆ ಸಾಧನವೂ ಲಾಭವೂ ಉಂಟುಮಾಡುತ್ತಾನೆ. ಮತ್ತು ನೀಚರ ಬಳಿಯಲ್ಲಿ ಕೆಲಸ ಸಿಕ್ಕುತ್ತೆ, ಕಪ್ಪು ವಸ್ತ್ರಗಳೂ ಸೇವಕರೂ ಸಿಕ್ಕುತ್ತಾರೆ, ಹೆಣ್ಣು ಕೂಸು ಹುಟ್ಟುತ್ತೆ. ಶನಿಯು ಸ್ಥಾನಾದಿಬಲವುಳ್ಳವನಾದರೆ ಪಾಳ್ಯಗಾರನ ಹಾಗೆ ಪ್ರಭಾವ, ಸೌಖ್ಯವೃದ್ಧಿ. ದುಷ್ಟಸ್ಥಾನಗಳಲ್ಲಿದ್ದರೆ ಕಷ್ಟಫಲ. ೨-೯ರಲ್ಲಿ ಕ್ರೂರ ಗ್ರಹದಿಂದ ಕೂಡಿದರೆ ತುರುಕರ ಕಾಟ, ಸೋದರಹಾನಿ, ಜೀವನಷ್ಟ, ಧನನಾಶ, ಆತ್ಮ ಬಂಧು ಗಂಡ ರವಿದೃಷ್ಟಿಯಿಂದ ತಲೆನೋವು. ಚಂದ್ರ ನೋಡಿದರೆ ಅಲಂಕಾರ ಲಾಭ, ಮಾತೃವರ್ಗಕ್ಕೆ ಸೌಖ್ಯ. ಕುಜ ನೋಡಿದರೆ ಮಿತ್ರಹಾನಿ, ರೋಗಪೀಡೆ. ಬುಧನೊಡನೆ ಕೂಡಿಯಿದ್ದರೂ ನೋಡಲ್ಪಟ್ಟರೂ ರಾಜಾಶ್ರಯ ಸಿಕ್ಕುತ್ತೆ, ಕುಟುಂಬವೃದ್ಧಿ, ಗುರು ನೋಡಿದರೆ ಸಂಸಾರಸೌಖ್ಯ. ಶುಕ್ರ ನೋಡಿದರೆ ಭೋಗಭಾಗ್ಯ ಹೆಚ್ಚು. ಆ ಶನಿಯು ಕುಜನಿಗೆ ಶುಭಸ್ಥಾನದಲ್ಲಿ ಬಲವಂತನಾಗಿದ್ದರೆ ದ್ರವ್ಯಲಾಭ, ಶೂದ್ರಪ್ರಭು ಸನ್ಮಾನ, ಭಾಗ್ಯವೃತ್ತಿ. ಕುಜನಿಗೆ ೬-೮-೧೨ ರಲ್ಲಿ ಕ್ರೂರಗ್ರಹಗಳಿಂದ ಕೂಡಿದರೆ ಶನಿಭುಕ್ತಿ ಬಂದಾಗ ಉಳಿಯುವುದೇ ಕಷ್ಟ. ೨-೭ನೇ ರಾಶಿಗಳಲ್ಲಿ ಇದ್ದರೆ ಅಪಮೃತ್ಯು ಭಯ. ಅದರ ಪರಿಹಾರಕ್ಕೆ ಮೃತ್ಯುಂಜಯ ಜಪವನ್ನು ಮಾಡಲು ಪರಿಹಾರವಾಗುವುದು.

---

## ಕುಜದಶಾ ಬುಧಭುಕ್ತಿ ೧೧ ತಿಂಗಳು ೨೭ ದಿನಕ್ಕೆ ಫಲ

ಕುಜದಶಾ ಬುಧಬುಕ್ತಿಯಲ್ಲಿ ಬುಧನೂ ಜನ್ಮ ಕಾಲದಲ್ಲಿ ಲಗ್ನಕ್ಕೆ ಕೇಂದ್ರ ತ್ರಿಕೋಣ ೩-೧೧ ಉಚ್ಚ ಇವುಗಳಲ್ಲಿ ಇದ್ದರೆ ನೀಚ ಮಾರ್ಗವೂ, ಮೃಷ್ಟಾನ್ನ

ೋಜನಾಧಿ ಸುಖವೂ, ವಸ್ತ್ರವಾಹನಾದಿಗಳೂ ಪ್ರಭು ಪ್ರಸಾದವೂ, ಮನೆಯಲ್ಲಿ ಶುಭ ರ್ಯಗಳೂ ಆಗುವವು. ವಿರುದ್ಧವಾಗಿ ೬-೮-೧೨ ನೀಚರಾಶಿಗಳಲ್ಲಿದ್ದು ಕುಜನೊಡ ಾಡಿದರೆ ಹಗೆಗಳ ಕಾಟ, ಪರಸ್ಥಳವಾಸ, ರೋಗ, ಪಶುಹಾನಿ, ಮಾನಭಂಗವಾಗುತ್ತೆ. ದೃಷ್ಟಿ ಅಥವಾ ರವಿಯೊಡನೆ ಇರುವಿಕೆಯಿಂದ ಪ್ರಭುಪ್ರಸಾದ, ಅರ್ಥಲಾಭ. ಚಂದ್ರ ದ ಮಾತೃವರ್ಗವೃದ್ಧಿ, ದೇಹಾರೋಗ್ಯ, ವಿದ್ಯಾ, ಧನಾಧಿಕ್ಯ. ಕುಜ ನೋಡಲ್ಪಟ್ಟರೆ ನಸ್ಸಿಗೆ ಸಂಕಟ, ಮುಂದೆ ಕಷ್ಟ, ಬಳಿಕ ಸಾಧಾರಣವಾಗುತ್ತೆ. ಗುರುವಿನಿಂದ ಪುತ್ರ ಭ. ಶುಕ್ರನಿಂದ ವಸ್ತ್ರಾಲಂಕಾರ, ಸ್ತ್ರೀ ಸೌಖ್ಯ, ಶನಿಯಿಂದ ಧಾನ್ಯಹಾನಿ. ಆ ಧನು ಕುಜನಿಗೆ ಶುಭಸ್ಥಾನಗಳಲ್ಲಿ ಇದ್ದರೆ ನೆಂಟರು ಬರುವರು, ಕೆಲಸ ಕೈಗೂಡು ನು, ಒಡವೆ ಮಾಡಿಸುವನು. ಪಾಪಸ್ಥಾನಗಳಲ್ಲಿದ್ದರೆ ಕುಟುಂಬ ಪೀಡೆ, ವ್ಯಾಪಾರ ಲ್ಲಿ ಭಯ. ೨-೭ರಲ್ಲಿ ಇದ್ದರೆ ಮೈಗೆ ಬೇನೆ. ಇದಕ್ಕೆ ಸೂರ್ಯಪ್ರಾರ್ಥನೆ ಮಾಡಿ ಷ್ಣುಸಹಸ್ರನಾಮವನ್ನು ಜಪಿಸಿ ಕುದುರೆಯನ್ನು ದಾನ ಕೊಟ್ಟರೆ ಅನಿಷ್ಟ ಶಾಂತಿ ಾಗುತ್ತೆ.

---

## ಕುಜದಶಾ ಕೇತುಭುಕ್ತಿ ೪ ತಿಂಗಳು ೨೭ ದಿನಕ್ಕೆ ಫಲ

ಕುಜದಶಾ ಕೇತುಭುಕ್ತಿಯಲ್ಲಿ ಆಕೇತುವು ಲಗ್ನಕ್ಕೆ ಶುಭಸ್ಥಾನದಲ್ಲಿಯೂ ಉಚ್ಚ ಶಿಯಲ್ಲಿಯೂ ಇರುವನಾದರೆ ಶುಭಫಲ, ಸ್ವಲ್ಪ ಸೌಖ್ಯ, ತೀರ್ಥಸ್ನಾನ, ಪುಣ್ಯಕಾರ್ಯ -೮-೧೨ರಲ್ಲಿಯೂ ನೀಚದಲ್ಲಿಯೂ ಇದ್ದರೆ ಕಳ್ಳರ ಪೆಟ್ಟು, ವಿಷಗಂಡ, ಕುಟುಂಬ ಡೆ, ಹೆರವರ ಹಂಗು, ಮುಂಡೆಯರ ಜಗಳ, ತಲೆನೋವು, ರವಿಯು ನೋಡಿದರೆ ರ. ಚಂದ್ರ ನೋಡಿದರೆ ಮಾತೃವರ್ಗ ಕಷ್ಟ, ಕುಜ ದೃಷ್ಟಿಯಿಂದ ಮನಸ್ಸಿಗೆ ತೆ. ಬುಧದೃಷ್ಟಿಯಿಂದ ಆಯುಧವ್ಯಾಸಂಗ, ಬರವಣಿಗೆ ಕೆಲಸ. ಗುರು ದೃಷ್ಟಿ ಂದ ಸಂತಾನ ಲಾಭ. ಶುಕ್ರದೃಷ್ಟಿಯಿಂದ ಹೆಂಗಸರುಗಳಿಗೆ ಅಕ್ಷೇಮ, ಮನೆಗೆ ಂದರೆ, ಬುದ್ಧಿಗೆ ವಿಕಾರ. ಶನಿದೃಷ್ಟಿಯಿಂದ ನೀಚರ ಸೇವೆ, ಹೆಂಗಸರ ಜಗಳ. ಜನಿಗೆ ೬-೮-೧೨ರಲ್ಲಿ ಇದ್ದರೆ ಕುಟುಂಬ ಹಾನಿ. ಶುಭಸ್ಥಾನಗಳಲ್ಲಿದ್ದರೆ ಅವ ಾಡನೆ ಶುಭಗ್ರಹ ಸೇರಿದರೆ ಧನಧಾನ್ಯವೃದ್ಧಿ. ಮಾರಕಸ್ಥಾನದಲ್ಲಿದ್ದರೆ ಅಪಮೃತು ಡ. ಶ್ರೀ ರುದ್ರಜಪ ಮಾಡುವುದಲ್ಲದೆ ಕರೀ ಮೇಕೆಯನ್ನು ದಾನ ಮಾಡುವದ ದಲೂ ಶಾಂತಿಯಾಗವದು.

---

## ಕುಜದಶಾ ಶುಕ್ರಭುಕ್ತಿ ೧೪ ತಿಂಗಳಿಗೆ ಫಲ

ಕುಜದಶಾ ಶುಕ್ರಭುಕ್ತಿ ಬಂದಾಗ ಜನನ ಕಾಲದಲ್ಲಿ ಆ ಶುಕ್ರನು ಶುಭಸ್ಥಾನದ ದ್ದವನಾದರೆ, ದಶಾಭುಕ್ತಿ ಕಾಲದಲ್ಲಿ ರಾಜಭೋಗವನ್ನೆಲ್ಲ ಕೊಡುವನು. ಫಲಗಳೆಲ್ಲ

ಭವಾಪಂಥಾವುಗಳಿ. ಕುಜನು ಲಾಭಾಧಿಪತಿಯಾಗಿದ್ದು ಆವನಲ್ಲಿ ಲಗ್ನಾಧಿಪ ಭುಕ್ತಿ ಬಂದರೆ ಮಹಾ ಸೌಖ್ಯ, ೬-೮-೧೨ರಲ್ಲಿ ನೀಚನಾದರೆ ಅವನ ಭುಕ್ತಿಯಲ್ಲಿ ಹೆಂಗಸರ ವಿರೋಧ, ಕಾರ್ಯಭಂಗ, ನಷ್ಟಕಷ್ಟಗಳು, ಪ್ರಾಣಭಯ ; ರವಿದೃಷ್ಟಿಯಿಂದ ಅರಮನೆ ತಂಟೆ, ಚಂದ್ರದೃಷ್ಟಿಯಿಂದ ಭೋಗ, ಕುಜದೃಷ್ಟಿಯಿಂದ ಹೆಂಡತಿಗೆ ಬಸುರು ಇಳಿಯುತ್ತೆ, ಬುಧದೃಷ್ಟಿಯಿಂದ ವಿದ್ಯಾಗುರುವಿನಿಂದ ವೈಗೆ ಆರೋಗ್ಯ, ಬ್ರಾಹ್ಮಣ ಪ್ರಭುವಿನಿಂದ ಸೌಖ್ಯ; ಶನಿಯಿಂದ ಉದ್ಯೋಗಹಾನಿ, ಶುಕ್ರನು ಕುಜನಿಗೆ ಕೇಂದ್ರಾದಿ ಶುಭಸ್ಥಾನಗಳಲ್ಲಿದ್ದರೆ ಸಂತೋಷ. ೬-೮ ಮೊದಲಾದ ಪಾಪಸ್ಥಾನಗಳಲ್ಲಿ ರೋಗ, ದುಃಖ, ಹಿಂಸೆ, ಪೂರ್ಣಚಂದ್ರ ನೋಡಿದರೆ ಉದ್ದಿಷ್ಟ ಸಿದ್ಧಿ, ಉತ್ತರಕ್ಕೆ ಪ್ರಯಾಣ ಪ್ರಭುದರುಶನ, ಕ್ಷೀಣಚಂದ್ರನಾದರೆ ನಾನಾ ಬಗೆ ಕಷ್ಟಗಳು, ಮಾರಕಸ್ಥಾನದಲ್ಲಿದ್ದ ಶರೀರಕ್ಕೆ ಪೀಡೆ. ಇದರ ಪರಿಹಾರಕ್ಕೆ ದುರ್ಗಾ ಜಪವಂ ಮಾಡಿದರೆ ಆರೋಗ್ಯ ಉಂಟಾದೀತು.

## ಕುಜದಶಾ ರವಿಭುಕ್ತಿ ೪ ತಿಂಗಳು ೬ ದಿನಕ್ಕೆ ಫಲ

ಕುಜದಶಾ ರವಿಭುಕ್ತಿಯಲ್ಲಿ ರವಿಯು ಲಗ್ನಕ್ಕೆ ಕೇಂದ್ರಾದಿ ಶುಭಸ್ಥಾನಗಳಲ್ಲಿ ಉಚ್ಚಾದಿ ಬಲವಂತನಾದರೆ ರಾಜಾಶ್ರಯ, ದೇವರಧ್ಯಾನ, ಸಂತಾನಸೌಖ್ಯ; ಲಗ್ನಕ್ಕೆ ೬-೮-೧೨ರಲ್ಲಿ ನೀಚದಲ್ಲಿದ್ದರೆ ಅವನ ಭುಕ್ತಿಯಲ್ಲಿ ಕಲಹ, ಸ್ಥಾನನಾಶ, ಬಂಧುನಾಶ, ರಾಜಭೀತಿ, ಪಿತ್ತರೋಗ, ಇತರ ರೋಗಗಳು, ಚಂದ್ರನಿಂದ ನೋಡಲ್ಪಟ್ಟರೂ ಕೂಡಿ ದರೂ ಸೌಖ್ಯಗಳು, ಯತ್ನಕಾರ್ಯ ಸಿದ್ಧಿ. ಕುಜನಿಂದ ಖಜಾಬಕೇಡಿ, ಹಗೆತನ, ಬುಧನಿಂದ ನೆಂಟರಿಗೆ ಉಪಕಾರ, ಸಭಾಪೂಜ್ಯತೆ, ಗುರುವಿನಿಂದ ಪ್ರಭುಮಿತ್ರ ಸುಖ, ಪುತ್ರಲಾಭ, ಭೋಗ. ಶುಕ್ರನಿಂದ ವಾಹನ, ಕುದುರೆ, ಭಂಗಾರ, ರತ್ನ ಲಾಭ. ಶನಿ ಯಿಂದ ಹೆಂಗಸರ ಕಾಟ, ಸೇವಕಹಾನಿ, ವಾಹನಭಂಗ, ದಶಾಧಿಪತಿಗೆ ಕೇಂದ್ರದಲ್ಲಾ ಗಲೀ ತ್ರಿಕೋಣಗಳಲ್ಲಾಗಲೀ ಲಾಭದಲ್ಲಾಗಲೀ ಇದ್ದರೆ ಶುಭಯುತದೃಷ್ಟನಾದರೆ ಕಲ್ಯಾಣಕಾರ್ಯ, ಭೂಷಣಪ್ರಾಪ್ತಿ, ಪಶ್ಚಿಮಕ್ಕೆ ಪ್ರಯಾಣ, ಕಾರ್ಯಸಿದ್ಧಿ, ವಿಷಮಸೌಖ್ಯ ಗಳಾಗುತ್ತದೆ. ದಶಾಧಿಪತಿಗೆ ೬-೮-೧೨ರಲ್ಲಿ ಪಾಪಯುತದೃಷ್ಟನಾಗಿದ್ದರೆ ಕಲಹವೃದ್ಧಿ ದಾಯಾದಿನಾಶ, ರಾಜಕೋಪ, ರೋಗಗಳು. ೨-೭ರಲ್ಲಿದ್ದರೆ ಅಪಮೃತ್ಯು, ಭಯ ಅದಕ್ಕೆ ತಾವರೆ ಹೂವುಗಳನ್ನು ವಿಧಿಪ್ರಕಾರ ದಾನ ಕೊಟ್ಟರೆ ಪರಿಹಾರವಾಗುವುದು.

## ಕುಜದಶಾ ಚಂದ್ರಭುಕ್ತಿ ತಿಂಗಳು ೭ಕ್ಕೆ ಫಲ

ಕುಜದಶಾ ಚಂದ್ರಭುಕ್ತಿಯಲ್ಲಿ ಚಂದ್ರನು ಲಗ್ನದಿಂದ ಕೇಂದ್ರತ್ರಿಕೋಣ ೩-೧೧ ಉಚ್ಚಗಳಲ್ಲಿದ್ದರೆ ಅಧಿಕ ಭಾಗ್ಯ, ಮಂಗಳ, ಕುಟುಂಬವೃದ್ಧಿ, ಕೃಷಿವೃದ್ಧಿ, ಕಾರ್ಯಸಿದ್ಧಿ.

ಗ್ನದಿಂದ ೬-೮-೧೨ ನೀಚಗಳಲ್ಲಿದ್ದರೆ ಅದಾನ್ನ, ರೋಗಗಳು, ನೆಂಟರ ಕಲಹ, ಕಾರ್ಯ ಹಾನಿ, ಮುಂಡೇರ ಜಗಳ, ತಾಯಿಗೆ ಕಷ್ಟ. ಸೂರ್ಯನಿಂದ ನೋಡಿದರೂ ಕೂಡಿದರೂ ರಾಜಪ್ರಸಾದ, ಕುಟುಂಬಹಾನಿ, ಸದ್ವಸ್ತು ಲಾಭ, ಕುಜನಿಂದ ನೋಡಿದರೆ ಜ್ವರಾದಿ ಪೀಡೆ, ಕಲಹ, ಭೂಹಾನಿ, ಬುಧನಿಂದ ಮನೆ ದೊರೆಯುತ್ತೆ, ಗುರುವಿನಿಂದ ಪುತ್ರ ಲಾಭ, ಶುಕ್ರನಿಂದ ಸ್ತ್ರೀಪ್ರಾಪ್ತಿ, ಸೌಖ್ಯ, ವಸ್ತ್ರ ಭೂಷಣ ಲಾಭ. ಶನಿಯಿಂದ ಭೃತ್ಯ ವರ್ಗ ನಾಶ, ಕ್ಷೇತ್ರಹಾನಿ, ದಶಾಧಿಪತಿಗೆ ೬-೮-೧೨ರಲ್ಲಿ ಪಾಪಗ್ರಹದಿಂದ ಕೂಡಿದರೆ ದೇಹಕ್ಕೆ ತಾಪ, ಬುದ್ಧಿಭ್ರಂಶ, ಪ್ರಯಾಣದಲ್ಲಿ ಕೇಡು, ಭುಕ್ತಿನಾಥನು ದಶಾನಾಥನಿಗೆ ಕೇಂದ್ರತ್ರಿಕೋಣ ೩-೧೧ ರಾಶಿಗಳಲ್ಲಿ ಶುಭಗ್ರಹದಿಂದ ಕೂಡಿದರೆ ಧನಲಾಭ. ವಸ್ತ್ರಾಭರಣಲಾಭ, ಮಗಳು ಹುಟ್ಟುತ್ತಾಳೆ ಅಥವ ಸ್ತ್ರೀ ಪ್ರೀತಿ. ದಶಾಭುಕ್ತಿನಾಥನು ಲಗ್ನಕ್ಕಾಗಲೀ ಚಂದ್ರನಿಗಾಗಲೀ ಸರ್ವತ್ರ ಮಾರಕಸ್ಥಾನಾಧಿಪತಿಯಾದರೂ ಮಾರಕಸ್ಥಾನದಲ್ಲಿದ್ದರೂ ಅಪಮೃತ್ಯು ಭಯ. ಅದರ ಪರಿಹಾರಕ್ಕಾಗಿ ದುರ್ಗಾಮಂತ್ರ ಜಪವನ್ನೂ ದಾನಗಳನ್ನೂ ಮಾಡಿದರೆ ಪರಿಹಾರವಾಗುವುದು.

***

## 18 ರಾಹುದಶಾ ೧೮ ವರ್ಷಕ್ಕೆ ಫಲ

ದಶಾಧಿಪತಿಯಾದ ರಾಹು ಸಾಮಾನ್ಯವಾಗಿ ಹೆಚ್ಚು ಕಷ್ಟ, ಹುಚ್ಚತನ, ಕುಟುಂಬಹಾನಿ, ಪರದೇಶಗಮನ, ಕಲಹ ಇತ್ಯಾದಿ ಕಷ್ಟಫಲಪ್ರದನಾಗಿ ಇರುವನು. ರಾಹುವು ಅತ್ಯುಚ್ಚದಲ್ಲಿದ್ದರೆ ಅವನ ದೆಶೆಯಲ್ಲಿ ಬಂಧುಕ್ಷೇಮ, ವಿವಾದಜಯ, ಗ್ರಾಮಾದಿ ಲಾಭ, ವಾಹನಾದಿ ಸುಖಗಳಾಗುತ್ತವೆ, ಉಚ್ಚದಲ್ಲಿದ್ದರೆ ಕಲ್ಯಾಣಕಾರ್ಯ, ಪ್ರಭು ಸನ್ಮಾನ, ಸ್ತ್ರೀಸೌಖ್ಯ. ಅತಿಮಿತ್ರ ಕ್ಷೇತ್ರದಲ್ಲಿದ್ದರೆ ತೀರ್ಥಯಾತ್ರಾದಿ ಪುಣ್ಯಲಾಭ. ಮಿತ್ರಕ್ಷೇತ್ರದಲ್ಲಿದ್ದರೆ ಜನಾನುಕೂಲ್ಯ ವಿದ್ಯಾವಿನೋದ ಉಪಕಾರ ಲಾಭಾದಿಗಳು, ಸಮಕ್ಷೇತ್ರದಲ್ಲಿದ್ದರೆ ಕೆಲವುಕಾಲ ಸುಖ, ಕೆಲವುಕಾಲ ಕಷ್ಟ. ದಶಾಂಶದಲ್ಲಿ ಸ್ಥಾನಚ್ಯುತಿ, ಶತೃಕ್ಷೇತ್ರದಲ್ಲಿದ್ದರೆ ಕಾರ್ಯಹಾನಿ, ಪ್ರಭುಕೋಪ, ಅಪಜಯ, ಅಧಿಶತ್ರುಕ್ಷೇತ್ರದಲ್ಲಿ ಕಲಹ, ರೋಗ, ಹಾನಿ, ವಿಷಭಾಧೆ. ನೀಚನಾಗಿದ್ದರೆ ನೀಚಯೋಗ, ನೀಚಭೋಗ, ಕಳತ್ರಸುಖ ಹಾನಿ, ಅತಿ ನೀಚದಲ್ಲಿ ಜೀವಹಿಂಸೆ, ಭಯ ಕಷ್ಟ. ಶುಭಯುತನಾದರೆ ಜನಾನುಕೂಲ್ಯ, ಅಧಿಕಾರವೃದ್ಧಿ, ವಿಜಯಾದಿ ಶುಭಫಲ. ಪಾಪಯುತನಾದಲ್ಲಿ ದುರಾಲೋಚನೆ, ಸ್ಥಾನನಾಶ, ರೋಗಾದಿ ಕಷ್ಟಫಲಗಳು.

————

## ರಾಹುದಶಾ ರಾಹುಭುಕ್ತಿ ೩೨ ತಿಂಗಳು ೧೨ ದಿನಕ್ಕೆ ಫಲ

ರಾಹುದಶಾ ರಾಹುಭುಕ್ತಿಯಲ್ಲಿ ಆ ರಾಹು ಲಗ್ನಕ್ಕೆ ಕೇಂದ್ರತ್ರಿಕೋಣಗಳಲ್ಲಿ ೩-೧೧ರಲ್ಲಿ ಶುಭಗ್ರಹದಿಂದ ಕೂಡಿಯಿದ್ದರೆ ದ್ರವ್ಯಲಾಭ, ಕೃಷಿಲಾಭ, ಶುಭಕಾರ್ಯ, ಸಂತೋಷ, ವಿಧವಾಸಂಗ. ಲಗ್ನಕ್ಕೆ ೬-೮ರಲ್ಲಿ ರಾಹುವಿದ್ದರೆ ಅವನು ಪಾಪಗ್ರಹದಿಂದ ಕೂಡಿದ್ದರೆದೆಶೆ, ಅವನ ಭುಕ್ತಿಯಲ್ಲಿ ಮುಂಡೆಯರ ಜಗಳ, ಸ್ಥಾನಹಾನಿ, ಜ್ಞಾತಿಕಲಹ, ಕಾರ್ಯಭಂಗ. ರವಿಸಂಬಂಧವಿದ್ದರೆ ಜ್ವರಸನ್ನಿ, ಪಶುನಷ್ಟ, ಜಗಳ; ಚಂದ್ರಸಂಬಂಧ ವಿದ್ದರೆ ಮಾತೃವರ್ಗಕ್ಲೇಶ, ಕುಜಸಂಬಂಧವಿದ್ದರೆ ವಿಷಶತ್ರುಭಯ, ಬುಧಸಂಬಂಧ ವಿದ್ದರೆ ನೆಂಟರ ಭಯ, ಅಪವಾದ ; ಗುರುಸಂಬಂಧವಿದ್ದರೆ ಪುತ್ರಪೀಡೆ; ಶುಕ್ರ ಸಂಬಂಧವಿದ್ದರೆ ಹೆಂಗಸರಿಗೆ ರೋಗ, ಧನಹಾನಿ ; ಶನಿಸಂಬಂಧವಿದ್ದರೆ ರೋಗಗಳು, ೨-೭ ರಲ್ಲಿದ್ದರೆ ಅಪಮೃತ್ಯುಭಯ. ಅದಕ್ಕೆ ಶಾಂತಿ ದುರ್ಗಾಮಂತ್ರ ಜಪ ಮಾಡಿ ನಾಗಪ್ರತಿಮೆ ದಾನ ಕೊಟ್ಟರೆ ಸುಖವುಂಟಾಗುವುದು.

— —

## ರಾಹುದಶಾ ಗುರುಭುಕ್ತಿ ೨೮ ತಿಂಗಳು ೨೪ ದಿನಕ್ಕೆ ಫಲ

ರಾಹುದಶಾ ಗುರುಭುಕ್ತಿಯಲ್ಲಿ ಗುರುವು ಲಗ್ನಕ್ಕೆ ೭-೧೦-೫-೯-೩-೧೧ರಲ್ಲಿಯೂ ಕರ್ಕಾಟಕವಲ್ಲಿಯೂ, ಧನುರ್ಮೀನದಲ್ಲಿಯೂ, ಆ ನವಾಂಶಗಳಲ್ಲಿಯಾದರೂ ಜನ್ಮ ಕಾಲದೊಳಗೆ ಇದ್ದವನಾದರೆ ರಾಜದ್ರವ್ಯ ಲಾಭ, ಕೀರ್ತಿ, ವಾಹನ; ಭೂಮಿ, ಪಡುವ ಲಿಗೆ ಪ್ರಯಾಣ, ಕಾರ್ಯಾನುಕೂಲ. ಬ್ರಾಹ್ಮಣಸಹಾಯ, ಪುತ್ರೋತ್ಸವಾದಿ ಸೌಖ್ಯ. ಆ ಗುರುವು ಮಕರವಲ್ಲಾದರೂ ಶತ್ರುಗ್ರಹದ ಮನೆಯಲ್ಲಾದರೂ೬-೮-೧೨ರಲ್ಲಾದರೂ ಪಾಪಗ್ರಹದಿಂದ ಕೂಡಿದ್ದರೆ ಪಾಪಕೃತ್ಯವನ್ನು ಮಾಡುವನು. ಧನಧಾನ್ಯ ಹಾನಿ, ಪುತ್ರ ಕಷ್ಟ, ಸ್ಥಾನಭ್ರಂಶ. ಆ ಗುರುವು ರವಿಯೊಡಗೂಡಿದರೂ ರವಿಯಿಂದ ನೋಡ ಲ್ಪಟ್ಟರೂ ಸರ್ಕಾರದ ಜಗಳ, ವೆಚ್ಚ ಹೆಚ್ಚು, ಚಂದ್ರಸಂಬಂಧದಿಂದ ದನಗಳು ದೊರೆ ಯುತ್ತೆ. ಬಿಳೀಕುದುರೆ, ಕುಜನಿಂದ ಪಿತ್ತರೋಗ, ಘಾತಪಾತಗಳು, ಬುಧನಿಂದ ಜ್ಞಾನವೃದ್ಧಿ, ಮನೆಯ ಕೆಲಸ, ಶುಕ್ರನಿಂದ ವೈಭವ, ಶನಿಯಿಂದ ಸೇವಕ ಹಾನಿ, ದಾಯಾದಿ ಜಗಳ, ಗುರುವು ರಾಹುವಿಗೆ ೬-೮-೧೨ರಲ್ಲಿ ಪಾಪಗ್ರಹದಿಂದ ಕೂಡಿದರೆ ಜ್ಞಾನವೈತ್ಯ. ಕಾರ್ಯಹಾನಿ, ಜಗಳ, ದಂಡ ತೆರುವಿಕೆ, ಮಾರಕಗ್ರಹದಿಂದ ಕೂಡಿದರೆ ಮೃತ್ಯುಭಯ, ಶತರುದ್ರಜಪಾ ಸುವರ್ಣದಾನಗಳಿಂದ ಅಪಮೃತ್ಯು ಪರಿಹಾರ.

— —

## ರಾಹುದಶಾ ಶನಿಭುಕ್ತಿ ೩೫ ತಿಂಗಳು ೬ ದಿನಕ್ಕೆ ಫಲ

ರಾಹುದೆಶೆಯಲ್ಲಿ ಶನಿಭುಕ್ತಿಯೊಳಗೆ ಲಗ್ನಕ್ಕೆ ಕೇಂದ್ರತ್ರಿಕೋಣಗಳಲ್ಲಿಯಾಗಲೀ, ೃತೀಯ ಲಾಭಗಳಲ್ಲಾಗಲೀ, ಉಚ್ಚರಾಶಿಯಲ್ಲಾಗಲೀ ಶನಿ ಇದ್ದು ಪಾಪಕಷ್ಟ ಲಾಧೀನಾದರೆ ಜಗಳವೂ, ಅಧಿಕಾರಿಗಳ ದ್ವೇಷವೂ, ನೆಂಟರಿಗೆ ಹಾನಿಯೂ, ಿಯಾದವರ ಸಿಟ್ಟು, ಪಶುಗಂಡವೂ ಉಂಟಾಗುತ್ತೆ. ಆ ರಾಹು ಮಿಥುನ ಕನ್ಯ ಳಲ್ಲಿ ಬಲಾಧಿಕನಾಗಿದ್ದರೆ ಶನಿಯು ಮಕರ, ಕುಂಭ, ವೃಷಭ, ತುಲೆಗಳಲ್ಲಿ ಬಲಾಧಿಕ ಾಗಿ ರಾಹುವಿಗೆ ೭-೧೨-೩-೪-೧೦ ಥಾಶಿಗಳಲ್ಲಿ ಇದ್ದು ತಾತ್ಕಾಲಿಕ ಮಿತ್ರನಾದರೆ ಆ ುಕ್ತಿಯಲ್ಲಿ ನೀಚಜನಂಗಳ ಗುಂಪಿನ ಮೇಲೆ ಅಧಿಕಾರವೂ ನೀಚಫಲಲಾಭವು, ಬ್ಬಿಣ ಮೊದಲಾದ ಲೋಹಗಳಿಂದ ಲಾಭವು, ತುರುಕರಿಂದಲೂ ಧನಪ್ರಾಪ್ತಿಯು, ಪ್ಪುಕುದುರೆ, ನೀಲರತ್ನ, ಕರೀಬಟ್ಟೆ ಮುಂತಾದವುಗಳ ಪ್ರಾಪ್ತಿಯೂ ಉಂಟಾ ುತ್ತೆ. ಅದೇ, ರಾಹು ಪಾಪಿಯಾಗಿದ್ದು ಶನಿಯು ಪಾಪಗ್ರಹಯುಕ್ತನಾಗಿ ಪಾಪರಾಶಿ ಳಲ್ಲಿ ಇದ್ದರೆ ಮೇಲೆ ಹೇಳಿದ ಫಲಗಳಿಗೆ ವಿರುದ್ಧವಾಗಿ, ಕ್ರೂರಫಲ ನಡೆಯುತ್ತೆ, ಡುವಲಿಗೆ ಪ್ರಯಾಣವಾಗುತ್ತೆ, ರಾಹು ಶನಿಗಳಿಗೆ ಮಾರಕಸ್ಥಾನ ಸ್ಥಿತಿ, ಮಾರಕ ಹ ಸಂಬಂಧವಿದ್ದರೆ ಮೃತ್ಯುಭಯ, ಗಂಡಗಳುಂಟು. ಅದಕ್ಕೆ ಪರಿಹಾರವಾಗಿ ಶ್ವತ್ಥಪ್ರದಕ್ಷಿಣಾ ದುರ್ಗಾಮಂತ್ರಜಪ ರುದ್ರಾಭಿಷೇಕಗಳನ್ನು ಮಾಡಿದರೆ ಕ್ಷೇಮ ುಟಾಗುತ್ತೆ.

---

## ರಾಹುದಶಾ ಬುಧಭುಕ್ತಿ ೩೦ ತಿಂಗಳು ೧೮ ದಿನಕ್ಕೆ ಫಲ

ರಾಹುದಶಾ ಬುಧಭುಕ್ತಿಯಲ್ಲಿ ಆ ರಾಹು ಲಗ್ನಕ್ಕೆ ಕೇಂದ್ರತ್ರಿಕೋಣ ೩-೧೧ ರಾಶಿಗಳಲ್ಲಿದ್ದರೆ ವಸ್ತ್ರಭೂಷಣಲಾಭ, ಪಡುವಲಿಗೆ ಪ್ರಯಾಣ, ಪ್ರಭುದರುಶನ, ್ಯಾಣಕಾರ್ಯ, ಗ್ರಹಲಾಭ ಕೃಷಿ ವಾಣಿಜ್ಯ ಧನಲಾಭವಾಗುತ್ತೆ, ೩-೬-೧೨ ಿಯೂ ನೀಚವಲ್ಲಿಯೂ ಶತ್ರುಕ್ಷೇತ್ರದಲ್ಲಿಯೂ ಪಾಪಗ್ರಹಯೋಗದಿಂದ ಬುಧನು ಹೀನನಾದರೆ ಸ್ಥಳ ತಪ್ಪುತ್ತೆ, ಕಾರ್ಯಭಂಗ, ನಷ್ಟ ಕಷ್ಟಗಳು, ಜಗಳವಾಗುತ್ತೆ. ಸಂಬಂಧವಿದ್ದರೆ ಜ್ವರಭಯ, ದಂಡ ತೆರುವಿಕೆ, ಚಂದ್ರಸಂಬಂಧ ಸೌಖ್ಯ, ಕುಜ ದ ಘಾಯ, ಸ್ತ್ರೀವ್ಯಾಧಿ. ಗುರುವಿನಿಂದ ಸಂತಾನ ಸೌಖ್ಯ, ಶುಕ್ರನಿಂದ ಪಶು ಹನ, ದ್ರವ್ಯವೃದ್ಧಿ, ಶನಿಯೊಡನೆಗೂಡಿದರೆ ಕ್ಷೇತ್ರ ಧಾನ್ಯಹಾನಿ, ಬುಧನು ರಾಹು ಕೇಂದ್ರ ತ್ರಿಕೋಣ ೩-೧೧ರಲ್ಲಿ ಶುಭಯುಕ್ತನಾದರೆ ದ್ರವ್ಯಲಾಭ, ಶತ್ರುಜಯ, ುವೃದ್ಧಿ, ರಾಹುವಿಗೆ ೬-೮-೧೨ರಲ್ಲಿ ಪಾಪಯುಕ್ತನಾದರೂ ನೀಚನಾದರೆ ಮನೋ ಥೆ. ಉದ್ಯೋಗದಲ್ಲಿ ತಂಟೆ, ೨-೭ರಲ್ಲಿ ಇದ್ದರೆ ಅಪಮೃತ್ಯುಭಯ, ವಿಷ್ಣು ಸಹಸ್ರ ಮ ಜಪ ಸಾಲಿಗ್ರಾಮ ದಾನಗಳಿಂದ ಪರಿಹಾರವಾಗುವುದು.

---

## ರಾಹುದಶಾ ಕೇತುಭುಕ್ತಿ ೧೨ ತಿಂಗಳು ೧೮ ದಿನಕ್ಕೆ ಫಲ

ರಾಹುದಶಾ ಕೇತುಭುಕ್ತಿ–ಕೇತುವು ಲಗ್ನಕ್ಕೆ ಶುಭಸ್ಥಾನದಲ್ಲಿ ಇದ್ದರೆ ಚಿತ್ರವಸ್ತು ಲಾಭ, ಕುಟುಂಬ ಸೌಖ್ಯ, ಜಯ, ಪಾಪಸ್ಥಾನದಲ್ಲಿ ಇದ್ದರೆ ಶತ್ರುವೃದ್ಧಿ, ಕಳ್ಳರ ಕಾಟ, ನಷ್ಟ, ಜಗಳ, ಕುಟುಂಬಹಾನಿ, ರವಿ ಸಂಬಂಧವಿದ್ದರೆ ವಿಷಜ್ವರ, ಚಂದ್ರನಿಂದ ಮನಸ್ತಾಪ. ಕುಜನಿಂದ ರೋಗ, ಬುಧನಿಂದ ಮಾತೃವರ್ಗಹಾನಿ, ಗುರುವಿನಿಂದ ಕುಟುಂಬ ಪೀಡೆ, ಶುಕ್ರನಿಂದ ಸ್ತ್ರೀರೋಗ, ಶನಿಯಿಂದ ಜನಹಾನಿ. ಮಾರಕ ಸ್ಥಾನದಲ್ಲಿದ್ದರೆ ಅಪಮೃತ್ಯುಭಯ, ನಾಗದಾನದಿಂದ ಕ್ಷೇಮವಾಗುತ್ತೆ.

---

## ರಾಹುದಶಾ ಶುಕ್ರಭುಕ್ತಿ ೩೬ ತಿಂಗಳಿಗೆ ಫಲ

ರಾಹುದಶಾ ಶುಕ್ರಭುಕ್ತಿಯಲ್ಲಿ ಶುಕ್ರನು ಲಗ್ನಕ್ಕೆ ಶುಭಸ್ಥಾನದಲ್ಲಿ ಶುಭಬಲ ಯುಕ್ತನಾದರೆ ಪ್ರಾಭವ ಸೌಖ್ಯ, ವಾಹನಭೋಗ, ರತ್ನಾಭರಣಲಾಭ, ಸುಭೋಜನ, ಪಾಪಸ್ಥಾನದಲ್ಲಿ ಬಲಹೀನನಾದರೆ ಸ್ತ್ರೀ ವಿರೋಧ, ನಷ್ಟ. ರವಿ ಸಂಬಂಧವಾದರೆ ವಿರೋಧ, ಕಲಹ ಸ್ತ್ರೀ ಮೂಲಕ ಧನಹಾನಿ, ಚಂದ್ರನಿಂದ ಮೃಷ್ಟಾನ್ನ ಭೋಜನ, ಜಯ, ಮಾತೃವರ್ಗವೃದ್ಧಿ. ಕುಜನಿಂದ ಪಾಪಪ್ರಸಂಗ, ಕಾರ್ಯಹಾನಿ. ಬುಧನಿಂದ ಪುತ್ರೋತ್ಸವ, ಶುಭಕಾರ್ಯ, ದೇವಕಾರ್ಯ ಶನಿಯಿಂದ ಜನವಿರೋಧ ಪರಸ್ಥಳವಾಸ. ಶುಕ್ರನು ರಾಹುವಿಗೆ ಶುಭಸ್ಥಾನದಲ್ಲಿ ಶುಭಯುಕ್ತನಾದರೆ ಶುಭಫಲ ಪಾಪಸ್ಥಾನದಲ್ಲಿ ಪಾಪಯುಕ್ತನಾದರೆ ಪಾಪಫಲ. ಮಾರಕ ಸ್ಥಾನದಲ್ಲಿದ್ದರೆ ಅಪಮೃತ್ಯುಭಯ. ದುರ್ಗಾಜಪದಿಂದಲೂ ಗೋದಾನದಿಂದಲೂ ಕ್ಷೇಮವಾಗುತ್ತೆ.

---

## ರಾಹುದಶಾ ರವಿಭುಕ್ತಿ ೧೦ ತಿಂಗಳು ೧೪ ದಿನಕ್ಕೆ ಫಲ

ರಾಹುದಶಾ ರವಿಭುಕ್ತಿಯಲ್ಲಿ ರವಿಯು ಶುಭ ಬಲಾಧಿಕನಾದರೆ ರಾಜ ಕಾರ್ಯಾನುಕೂಲ. ಸ್ವಲ್ಪ ಧನಲಾಭ, ಸ್ವಲ್ಪ ಅಧಿಕಾರ, ಸ್ವಲ್ಪ ಕುಟುಂಬವೃದ್ಧಿ, ಗುರು ಚಂದ್ರ ಯೋಗವಿದ್ದರೆ ರಾಜಶ್ರಯ, ರವಿಯು ಉಚ್ಚನಾದರೆ ಅಧಿಕಾರ, ಭಾಗ್ಯವೃದ್ಧಿ, ಚಂದ್ರ ಸಂಬಂಧವಿದ್ದರೆ ಅನ್ನದಾನ, ಕುಜ ಸಂಬಂಧವಿದ್ದರೆ ಶಸ್ತ್ರಾಗ್ನಿ ವಿಷಗಂಡಗಳು, ಬುಧನಿಂದ ವಸ್ತ್ರಾಭರಣ, ಪಶುಲಾಭ, ಗುರುವಿನಿಂದ ಪುಣ್ಯಕಾರ್ಯಗಳು. ಶುಕ್ರನಿಂದ ದ್ರವ್ಯಲಾಭ, ಶನಿಯಿಂದ ಸೇವಕರ ಮೇಲೆ ಅಧಿಕಾರ, ಸ್ವಲ್ಪ ಹಾನಿ, ದಶಾಧಿಪತಿಗೆ ಶುಭಸ್ಥಾನದಲ್ಲಿ ಶುಭಫಲ, ಪಾಪಸ್ಥಾನದಲ್ಲಿ ಪಾಪಫಲ, ಮಾರಕಸ್ಥಾನದಲ್ಲಿದ್ದರೆ ಅಪಮೃತ್ಯು ಸೂರ್ಯಪ್ರಾರ್ಥನದಿಂದಲೂ ತಿಲಪದ್ಮದಾನದಿಂದಲೂ ಕ್ಷೇಮ ಉಂಟಾದೀತು.

---

## ರಾಹುದಶಾ ಚಂದ್ರಭುಕ್ತಿ ೧೮ ತಿಂಗಳಿಗೆ ಫಲ

ರಾಹುದಶಾ ಚಂದ್ರಭುಕ್ತಿಯಲ್ಲಿ ಚಂದ್ರನು ಪೂರ್ಣಕಲೆಯಾಗಿ ಲಗ್ನಕ್ಕೆ ಶುಭ ಸ್ಥಾನದಲ್ಲಿ ಉಚ್ಚಾದಿ ಬಲಗಳಿಂದ ಕೂಡಿದ್ದರೆ ಪೂರ್ಣ ಶುಭ ಫಲ, ಬಲ ಕಡಿಮೆ ಇದಷ್ಟೂ ಫಲ ಕಡಿಮೆ, ಬಲಹೀನನಾದರೆ ನಿಷ್ಫಲ, ಶುಭಫಲದಲ್ಲಿ ಸುಭೋಜನ, ಶುಭಕಾರ್ಯ, ಪದಾರ್ಥಲಾಭ, ಮನಸ್ಸಿಗೆ ಉಲ್ಲಾಸ, ಕೀರ್ತಿಯುಂಟು. ಲಗ್ನಕ್ಕೆ ೬-೮-೧೨ ರಲ್ಲಿಯೂ ನೀಚದಲ್ಲಿಯೂ ಕೂಡಿದರೆ ಮಾತೃ ಗಂಡ, ಪ್ರಭುಕೋಪ ಕಷ್ಟಕಷ್ಟಗಳು. ರವಿಯೊಡನೆ ಕೂಡಿದರೆ ಸ್ಥಳ ತಪ್ಪುತ್ತೆ, ತಾಪಜ್ವರ, ಕುಜಯುಕ್ತ ನಾದರೆ ಕಣ್ಣಿನಲ್ಲಿ ನೀರು, ಅಪಮೃತ್ಯು. ಬುಧನಿಂದ ವಸ್ತುಲಾಭ, ವಿದ್ಯಾಕೀರ್ತಿ ಗಳು, ಗುರುವಿನಿಂದ ಪುತ್ರ ಸ್ತ್ರೀ ಭಾಗ್ಯ, ಶುಕ್ರನಿಂದ ಸ್ತ್ರೀಸೌಖ್ಯ, ಶನಿಯಿಂದ ಪಶುಲಾಭ, ದಶಾಧಿಪತಿಗೆ ಶುಭಸ್ಥಾನದಲ್ಲಿದ್ದರೆ ಶುಭಫಲ, ವಸ್ತ್ರಾಲಂಕಾರಲಾಭ, ಪಾಪಸ್ಥಾನದಲ್ಲಿ ಹೀನಬಲನಾದರೆ ಪ್ರಾಣಹಾನಿ, ರೋಗವೃದ್ಧಿ, ಮಾರಕಸ್ಥಾನದಲ್ಲಿ ದ್ದರೆ ಅಪಮೃತ್ಯು. ಇದಕ್ಕೆ ಮೃತ್ಯುಂಜಯ ಜಪ ಮಾಡಿ ದೀಪ ದಾನ ಕೊಟ್ಟರೆ ಆರೋಗ್ಯವುಂಟಾಗುತ್ತೆ.

----

## ರಾಹುದಶಾ ಕುಜಭುಕ್ತಿ ೧೨ ತಿಂಗಳು ೧೮ ದಿನಕ್ಕೆ ಫಲ

ರಾಹುದಶಾ ಕುಜಭುಕ್ತಿಯಲ್ಲಿ ಕುಜನು ಲಗ್ನಕ್ಕೆ ೪-೭-೧೦-೫-೯-೩-೧೧ ರಲ್ಲಿಯೂ ಉಚ್ಚದಲ್ಲಿಯೂ ಶುಭಾಂಶದಲ್ಲಿಯೂ ಶುಭಗ್ರಹಯುಕ್ತನಾಗಿ ಬಲಿಷ್ಠನಾಗಿ ಲಗ್ನಕ್ಕೆ ಕೇಂದ್ರ ತ್ರಿಕೋಣಾಧಿಪತಿಯಾಗಿದ್ದರೆ ಕೃಷಿ ವೃದ್ಧಿ, ಭೂಲಾಭ, ರಕ್ತ ವಸ್ತ್ರ, ಪು ಶಾಯಿ, ಭಂಗಾರ, ಆಭರಣ, ಪ್ರಿಯಪದಾರ್ಥ ಲಾಭ, ಜಗಳದಲ್ಲಿ ಜಯ, ಧನಲಾಭ, ಸಹೋದರ ವೃದ್ಧಿ, ಕುಟುಂಬಸೌಖ್ಯ. ಆರೋಗ್ಯವುಂಟು. ಲಗ್ನಕ್ಕೆ ೮-೧೨ ರಲ್ಲಿಯೂ ನೀಚದಲ್ಲಿಯೂ ಬಲಹೀನನಾಗಿ ೩-೬-೧೧ಕ್ಕೆ ಅಧಿಪತಿಯಾದರೆ ವಿವಾದ ಬರುತ್ತೆ, ನಷ್ಟ ಹೆಚ್ಚು, ಕಾರ್ಯಹಾನಿ, ಅವನೊಡನೆ ರವಿ ಸೇರಿದರೆ ಉಷ್ಣ ರೋಗ, ವಿವಾದದಲ್ಲಿ ಸೋತುಹೋಗುವವನು, ಚಂದ್ರ ಮಂಗಳ ಯೋಗವಿದ್ದರೆ ಶುಭ ಫಲವಾಗುವುದು, ಬುಧ ಯೋಗದಿಂದ ತಾಯಿಕಡೆಯುವರಿಗೆ ಭಂಗ, ಬಂಧುವಿರೋಧ ಗುರುಯೋಗದಿಂದ ಪುತ್ರಹಾನಿ, ಧನನಷ್ಟ, ಕಾರ್ಯಭಂಗ. ಅದೇ ಗುರುವು ತತ್ಕಾಲಿಕ ಮಿತ್ರನಾಗಿದ್ದರೆ ಆ ದೋಷವಿಲ್ಲ. ಕುಜನೊಡನೆ ಶುಕ್ರನು ಸೇರಿಯಿದ್ದರೆ ವ್ಯಭಿಚಾರ ಸ್ತ್ರೀವಾಹನ ಲಾಭ, ಕುಟುಂಬಸೌಖ್ಯ, ಕಲ್ಯಾಣಕಾರ್ಯ, ಶನಿಯೋಗದಿಂದ ಪಶು ಪುತ್ರಹಾನಿ ನಾಲ್ಕುಕಾಲಿನ ಜಂತುವಿನಿಂದ ಗಂಡ, ರಾಹುವಿಗೆ ಕೇಂದ್ರತ್ರಿಕೋಣ

ಗಳಲ್ಲಿಯೂ ೩-೧೧ ರಲ್ಲಿಯೂ ಕುಜನಿದ್ದರೆ ಪಶುಲಾಭ; ಧಾನ್ಯವೃದ್ಧಿ; ವಾಹನ ಸೌಖ್ಯ; ರಾಹುವಿಗೆ ೬-೮-೧೨ರಲ್ಲಿ ಕುಜನು ಪಾಪಗ್ರಹದಿಂದ ಕೂಡಿಯಿದ್ದರೆ ಕುಜ ಭುಕ್ತಿಯಲ್ಲಿ ದಾಯಾದಿಗಳ ವ್ಯಾಜ್ಯ; ಕುಜನು ಮಾರಕಸಂಬಂಧಿಯಾದರೆ ಅಪ ಮೃತ್ಯು ಭಯ, ಈ ದೋಷಪರಿಹಾರಕ್ಕೆ ಸುಬ್ರಹ್ಮಣ್ಯ ಪೂಜೆಯೂ ನಾಗದಾನವೂ ಮಾಡಬೇಕು.

---

## ಗುರುದಶಾ ೧೬ ವರ್ಷಕ್ಕೆ ಫಲ

ಗುರುದಶಾದಲ್ಲಿ ಜಾತಕನು ಶುಭಫಲವನ್ನು ಹೊಂದುವನು. ಅಧಿಪತ್ಯ, ಪ್ರಭು ಸನ್ಮಾನ, ವಿದ್ಯೆ, ನೀತಿ, ಸುಖ ಇವುಗಳುಂಟಾಗುತ್ತೆ; ಗುರುವು ಅತ್ಯುಚ್ಚ ಭಾಗ ದಲ್ಲಿದ್ದರೆ ವಾಹನ ರತ್ನಾಭರಣಲಾಭ, ಅತಿಸೌಖ್ಯ. ಉಚ್ಚರಾಶಿಯಲ್ಲಿದ್ದರೆ ಕುಟುಂಬ ವೃದ್ಧಿ, ಸತ್ಕರ್ಮಬುದ್ಧಿ: ಉಚ್ಚಾಂಶದಲ್ಲಿದ್ದರೆ ಭಾಗ್ಯವೃದ್ಧಿ, ಉಚ್ಚ ಗ್ರಹದಿಂದ ಕೂಡಿದರೆ ಧರ್ಮಕಾರ್ಯ. ನೀಚಗ್ರಹದಿಂದ ಕೂಡಿದರೆ ಕುಟುಂಬ ಕಲಹ, ಅತಿ ನೀಚ ದಲ್ಲಿದ್ದರೆ ಸ್ಥಾನಭ್ರಂಶ, ಕುಟುಂಬಹಾನಿ, ಕಷ್ಟ; ನೀಚರಾಶಿಯಲ್ಲಿದ್ದರೆ ಕಾರ್ಯಹಾನಿ, ರಾಜಕೋಪ, ಕೃಷಿಭಂಗ; ಉಚ್ಚರಾಶಿಯಲ್ಲಿ ನೀಚಾಂಶದೊಳಗೆ ಇದ್ದರೆ ಭಾಗ್ಯ ಬಂದು ಕೆಡುವುದು; ನೀಚರಾಶಿ ಉಚ್ಚಾಂಶದೊಳಗಿದ್ದರೆ ಅತಿ ಕಷ್ಟವಾದರೂ ಭಾಗ್ಯ ಲಾಭ, ಅತಿ ಮಿತ್ರರಲ್ಲಿದ್ದರೆ ಸಹಾಯಕರಿಂದ ಲಾಭ ಮಿತ್ರರಾಶಿಯಲ್ಲಿದ್ದರೆ ಪಶು ಧಾನ್ಯವೃದ್ಧಿ; ಸ್ವಕ್ಷೇತ್ರದಲ್ಲಿದ್ದರೆ ಅಧಿಕಾರ, ಬಂಗಾರ, ದೊರೆಯುತ್ತೆ ; ಸಮರಾಶಿ ಯಲ್ಲಿದ್ದರೆ ಸ್ವಲ್ಪ ಅನುಕೂಲ, ಪುಣ್ಯಕಾರ್ಯ ಉಂಟಾಗುತ್ತೆ; ಶತ್ರುರಾಶಿಯಲ್ಲಿದ್ದರೆ ಸ್ವತ್ತುಗಳು ನಷ್ಟವಾಗುವುದು; ಅತಿಶತ್ರುರಾಶಿಯಲ್ಲಿದ್ದರೆ ಬಂಧುಹಾನಿ; ರೋಗಪೀಡೆ ಶುಭಗ್ರಹದಿಂದ ಕೂಡಿದರೆ ನೆಂಟರು ಬರುವರು. ಶುಭಫಲ; ಪಾಪಗ್ರಹದಿಂದ ಕೂಡಿ ದರೆ ಕಲಹದಿಂದ ಕಾರ್ಯಭಂಗ, ಶತ್ರುಗ್ರಹದಿಂದ ನೋಡಲ್ಪಟ್ಟರೆ ದೇಶಾಂತರ, ಧನಲಾಭ ಗುರುಪೂಜೆ, ಪುಣ್ಯಕಾರ್ಯ, ಪಾಪಗ್ರಹದಿಂದ ನೋಡಲ್ಪಟ್ಟರೆ ಕಷ್ಟ, ಸುಖ, ಮಿಶ್ರ ಫಲ, ಕೇಂದ್ರದಲ್ಲಿದ್ದರೆ ಸ್ತ್ರೀಪುತ್ರಸೌಖ್ಯ, ಹೆಸರುವಾಸಿ. ತ್ರಿಕೋಣದಲ್ಲಿದ್ದರೆ ಕಾರ್ಯ ಸಿದ್ಧಿ, ೬-೮-೧೨ರಲ್ಲಿದ್ದರೆ ಕಷ್ಟಫಲ, ಮೂಲತ್ರಿಕೋಣಗಳಲ್ಲಿ ವಿಶೇಷಸೌಖ್ಯ, ಗುರು ವಿಗೆ ಸ್ಥಾನಬಲದಿಂದ ಕುಟುಂಬ ಶುಭಫಲ, ದಿಗ್ಬಲವಿದ್ದರೆ ಪ್ರಸಿದ್ಧಿ, ರಾಜವರ್ಗ ಪ್ರೀತಿ ನೈಸರ್ಗಿಕಬಲವಿದ್ದರೆ ಸಹಜವಾದ ಮಹತ್ವ ಬರುವುದು, ವಕ್ರಗತಿಯಿಂದ ಜಗಳದಲ್ಲಿ ಜಯವಾಗುತ್ತೆ, ಭೋಗ ಹೆಚ್ಚುತ್ತೆ; ದಿಗ್ಬಲದಿಂದ ದೇಶಾಂತರ ಪ್ರಯಾಣವಾಗಿ ಪ್ರಭುದ್ರವ್ಯ ಲಾಭವಾಗುತ್ತೆ.

---

## ಗುರುದಶಾ ಗುರುಭುಕ್ತಿ ೨೫ ತಿಂಗಳು ೧೮ ದಿನಕ್ಕೆ ಫಲ

ಗುರುದಶಾ ಗುರುಭುಕ್ತಿಯಲ್ಲಿ ಗುರುವು ಲಗ್ನಕ್ಕೆ ಶುಭ ಸ್ಥಾನದಲ್ಲಿದ್ದರೆ ತೀರ್ಥ
ಾತ್ರೆ, ದೇವರ ದರುಶನ, ಸತ್ಕಾರ್ಯ, ಪುತ್ರೋತ್ಸವ, ಅನ್ನದಾನ, ವಿದ್ಯಾಕಾಲಕ್ಷೇಪ,
ಧಾನ್ಯ ಪಶುವೃದ್ಧಿ, ಜಗಳದಲ್ಲಿ ಜಯ; ಗೋಪುರಾಂಶದಲ್ಲಿ ಧರ್ಮಕರ್ಮಾದಿ
ಗಳೊಡನೆ ಗುರುವಿದ್ದರೆ ಮಹಾರಾಜಯೋಗ, ಪ್ರಭುಪ್ರೀತಿ, ನೀಚಾಂಶ. ನೀಚ
ಿಯಲ್ಲಿದ್ದರೆ ಅದು ಲಗ್ನಕ್ಕೆ ೬-೮-೧೨ನೇ ಸ್ಥಾನವಾಗಿ ಅಲ್ಲಿ ಪಾಪಗ್ರಹವು ಸೇರಿದರೆ
ವನ ಪಾಪಗ್ರಹದಿಂದ ನೋಡಲ್ಪಟ್ಟರೆ ಭುಕ್ತಿಯು ಆದಿಭಾಗದಲ್ಲಿ ನಿಷ್ಫಲವಾಗಿ ಕಲಹ,
ಪ್ರಭೀತಿ, ಮೃತ್ಯು, ಬಂಧುಹಾನಿ. ಗುರುವಿಗೆ ರವಿ ಸಂಬಂಧವಾದರೆ ರಾಜವಿದ್ವರ,
ಹನ ಆಯಾಸ. ಚಂದ್ರನಿಂದ ಕೂಡಿದರೂ ನೋಡಲ್ಪಟ್ಟರೂ ವಸ್ತ್ರವಾಹನಲಾಭ
ಯು ಕಡೆಯವರಿಗೆ ಅಭಿವೃದ್ಧಿ. ಕುಜನಿಂದ ಹಗೆ ಹೆಚ್ಚು, ವಾದದಲ್ಲಿ ಸೋಲು
ು; ಬುಧನಿಂದ ವಿದ್ಯಾ ವ್ಯಾಪಾರ ವೃದ್ಧಿ ; ಶುಕ್ರನಿಂದ ಕುಟುಂಬಭೋಗ, ಸೌಖ್ಯ;
ಯಿಂದ ಹಲವು ಬಗೆಯಾದ ಲಾಭವು. ಮಾರಕಸ್ಥಾನವಾದ ೨-೭ರಲ್ಲಿದ್ದರೆ ಅಪ
ೃತ್ಯು. ಅದರ ಪರಿಹಾರಕ್ಕೆ ರುದ್ರಪಾರಾಯಣವನ್ನು ಮಾಡಿ ಬಂಗಾರದ ಪ್ರತಿಮೆ
ನ್ನು ದಾನಮಾಡಲು ಶುಭವಹುದು.

---

## ಗುರುದಶಾ ಶನಿಭುಕ್ತಿ ೩೦ ತಿಂಗಳು ೧೨ ದಿನಕ್ಕೆ ಫಲ

ಗುರುದಶಾ ಶನಿಭುಕ್ತಿಯಲ್ಲಿ ಶನಿಯು ಲಗ್ನಕ್ಕೆ ೩-೧೧-೧-೪-೫-೭-೯-೧೦ ಈ
ಶಿಗಳಲ್ಲಿಯೂ ಉಚ್ಚದಲ್ಲಿಯೂ ಎಲ್ಲಿಯಾದರೂ ಬಲಾಧಿಕನಾಗಿದ್ದರೆ ಅವನ ಭುಕ್ತಿ
ಂದಾಗ ಬೇಸಾಯು ಕೈಗೂಡುತ್ತೆ, ರಾಜಾಶ್ರಯ ಲಾಭವಾಗುತ್ತೆ. ಕಪ್ಪು ಪದಾರ್ಥ
ು ದೊರೆಯುವುದು, ಶೂದ್ರಪ್ರಭುವಿನಿಂದ ಫಲವುಂಟು, ಕುಟುಂಬ ಜನವೃದ್ಧಿ
ದರೆ ಭುಕ್ತಿಯು ಹೋಗುವಾಗ ಸ್ಥಳಸಂಚಾರಕ್ಕೆ ವರ್ಗಕಷ್ಟವುಂಟಾದರೆ ಐದುತಿಂಗಳ
ೕಲೆ ಸೌಖ್ಯವಾಗುತ್ತೆ. ಲಗ್ನಕ್ಕೆ ೬-೮-೧೨ರಲ್ಲಿ ನೀಚನಾದರೆ ಅನ್ಯಸ್ತ್ರೀ ಪ್ರಸಕ್ತಿ,
ನ ಧಾನ್ಯ ಕುಟುಂಬಹಾನಿ ರವಿಸಂಬಂಧವಿದ್ದರೆ ತಲೆನೋವು, ರಾಜಮೂಲಕ ಧನ
ಾನಿ. ಶನಿದೃಷ್ಟಿಯಿದ್ದರೂ ಶನಿಯಿಂದ ಕೂಡಿದರೂ ವಾತರೋಗ, ಮಾತೃವರ್ಗ
ವರಿಗೆ ಭಂಗ. ಪುತ್ರವರ್ಗಕ್ಕೆ ಕೊರತೆ; ಕುಜಸಂಬಂಧವಾದರೆ ಪ್ರಯಾಣದಲ್ಲಿ ಜಗಳ
ರುತ್ತೆ, ಬುಧಸಂಬಂಧದಿಂದ ಚಿತ್ರ ಗೃಹದಲ್ಲಿ ಸಂಗೀತ, ಸಂತೋಷ. ಗುರುವಿನಿಂದ
ೂಡಿದರೂ ನೋಡಲ್ಪಟ್ಟರೂ ಶನಿಯು ಕಷ್ಟಫಲವನ್ನು ಕೊಡುವನು, ಪುತ್ರಶೋಕ
ಂದೀತು. ಶುಕ್ರ ಸಂಬಂಧದಿಂದ ಸ್ತ್ರೀಸೌಖ್ಯ, ರಾಜಾಶ್ರಯ, ಇಷ್ಟಸಿದ್ಧಿ. ದಶಾಧಿ
ತಿಗೆ ಭುಕ್ತಿನಾಥನು ಶುಭಸ್ಥಾನದಲ್ಲಿದ್ದು ಶುಭಗ್ರಹದಿಂದ ಕೂಡಿದರೆ ಧನ, ಭೋಗ,

ಲಾಭ, ಭಾಗ್ಯಪ್ರಾಪ್ತಿ, ಶೂದ್ರಪ್ರಭು ಸಹಾಯ, ಆವನ ಶತ್ರುಗಳಿಗೆ ಹಾನಿ. ದಶಾಧಿಪತಿಗೆ ೬-೮-೧೨ರಲ್ಲಿ ಪಾಪಗ್ರಹದಿಂದ ಕೂಡಿದಾಗ್ಯೂ ನೀಚಕ್ಷೇತ್ರ ಶತ್ರುಕ್ಷೇತ್ರಗಳಲ್ಲಿ ಇದ್ದಾಗ್ಯೂ ಕುಟುಂಬ ಕಲಹ, ನೆಂಟರಿಗೆ ಪೀಡೆ, ನಂತರ ಬಹಳ ಕಷ್ಟಗಳು. ೨-೭ ದಲ್ಲಿದ್ದರೆ ಅಪಮೃತ್ಯು ಭಯ. ಮೃತ್ಯುಸೂಕ್ತ ಜಪದಿಂದಲೂ ಕಪ್ಪು ಮೇಕೆಯ ದಾನ ದಿಂದಲೂ ಮೃತ್ಯು ಪರಿಹಾರವಾಗುವುದು.

---

## ಗುರುದಶಾ ಬುಧಭುಕ್ತಿ ೨೭ ತಿಂಗಳು ೬ ದಿನಕ್ಕೆ ಫಲ

ಗುರುದಶಾ ಬುಧಭುಕ್ತಿಯಲ್ಲಿ ಬುಧನು ಲಗ್ನಕ್ಕೆ ಶುಭಸ್ಥಾನದಲ್ಲಿ ಉಚ್ಚಾದಿ ಬಲ ಸಹಿತನಾಗಿದ್ದರೆ ವಿದ್ಯಾವಿಲಾಸಗಳೂ, ಉದ್ಯೋಗಲಾಭವೂ, ರಾಜಾಶ್ರಯವೂ, ವ್ಯವ ಸಾಯದಲ್ಲಿ ಫಲಪ್ರಾಪ್ತಿಯೂ, ವ್ಯವಹಾರದಲ್ಲಿ ಜಯವೂ, ಪುತ್ರೋತ್ಸವವೂ, ಮನೆ ಯಲ್ಲಿ ಶುಭಪ್ರಸ್ತುತಗಳು ಮಹಾಯಾತ್ರೆಯು ಲಭಿಸುತ್ತೆ. ಲಗ್ನಕ್ಕೆ ದುಷ್ಟ ಸ್ಥಾನ ಗಳಲ್ಲಿ ಬಲಹೀನನಾದರೆ ಪ್ರಭುಕೋಪ, ಪಶುಹಾನಿ, ಅಪವಾದ, ಕುಲಕೇಡು, ಗುರು ದ್ವೇಷ, ಕುಟುಂಬಹಾನಿ ಮೊದಲಾದ ಕಷ್ಟಫಲಗಳಾಗುವುದು. ನೋಡುವ ಅಥವ ಕೂಡಿರುವ ರವಿಯಿಂದ ನೆಂಟಸ್ತಿಕೆಯ ಸೌಖ್ಯವು, ಪರಸ್ಥಳ ಪ್ರಯಾಣ, ತಲೆನೋವು, ಭಯ. ಚಂದ್ರನಿಂದ ಮನಸ್ಸಿಗೆ ಉಲ್ಲಾಸ, ಕಾರ್‍ಯಾನುಕೂಲ; ಕುಜನಿಂದ ಆಯುಧ ಗಂಡ, ದುಷ್ಟಾನ್ನ ಭೋಜನ ; ಗುರುವಿಂದ ದೇವಪ್ರಸಾದ ; ಶುಕ್ರನಿಂದ ವಿದ್ಯಾ, ಕ್ರೀಡಾಕಾಲಕ್ಷೇಪ, ಶನಿಯಿಂದ ಯತ್ನ ಕಾರ್ಯಗಳು ಕೆಟ್ಟುಹೋಗುವುವು; ಬುಧನು ಗುರುವಿಗೆ ೧-೩-೪-೫-೭-೯-೧೦-೧೧ನೇ ರಾಶಿಗಳಲ್ಲಿ ಶುಭಗ್ರಹದಿಂದ ಕೂಡಿದ್ದರೆ ಅಧಿಕ ಧನಲಾಭ; ಸಕಲ ಕಾರ್‍ಯಸಿದ್ಧಿ, ಕೃಷಿವೃದ್ಧಿ. ದಶಾಧಿಪತಿಗೆ ೬-೮-೧೨ರಲ್ಲಿ ಪಾಪ ಗ್ರಹದಿಂದ ಕೂಡಿದರೆ ಅಂಥಾ ಬುಧಭುಕ್ತಿಯಲ್ಲಿ ರೋಗ, ಜಗಳ, ಬಡತನ, ನೆಂಟರಿಗೆ ಹಾನಿ, ಪಶುಕ್ಷಯ. ಆ ಬುಧನು ಮಾರಕಸ್ಥಾನದಲ್ಲಿದ್ದರೆ ಅಪಮೃತ್ಯುಗಂಡ. ಇದರ ಪರಿಹಾರಕ್ಕಾಗಿ ಮಕರ ವಾಹನದ ಮೇಲೆ ಸುವರ್ಣದಿಂದ ವರುಣ ಪ್ರತಿಮೆಯನ್ನು ಮಾಡಿಸಿ ದಾನಮಾಡಲು ಉತ್ತಮ.

---

## ಗುರುದಶಾ ಕೇತುಭುಕ್ತಿ ೧೧ ತಿಂಗಳು ೬ ದಿನಕ್ಕೆ ಫಲ

ಗುರುದಶಾ ಕೇತುಭುಕ್ತಿಯಲ್ಲಿ ಕೇತುವು ಲಗ್ನಕ್ಕೆ ಶುಭಸ್ಥಾನಗಳಲ್ಲಿ ಉಚ್ಚಾದಿ ಬಲಯುಕ್ತನಾಗಿದ್ದರೆ ಕೀರ್ತಿ, ಪ್ರತಾಪ, ಆರೋಗ್ಯ, ರಾಜಾಶ್ರಯ, ಶುಭಕಾರ್‍ಯ, ಮಣಿ ಮಂತ್ರಸಿದ್ಧಿ, ಧನಲಾಭ, ಪುಣ್ಯಕಾರ್‍ಯ ನಡೆಯುತ್ತೆ, ದೂರದಿಂದ ವಾರ್ತೆ ಬರುತ್ತೆ. ಲಗ್ನಕ್ಕೆ ಪಾಪಸ್ಥಾನಗಳಲ್ಲಿ ಬಲಹೀನನಾಗಿದ್ದರೆ ಉದ್ಯೋಗದಲ್ಲಿ ಮತ್ತೊಂದುಕಡೆಗೆ

ರ್ಗವಾಗುತ್ತೆ, ಕೃಷಿಯಲ್ಲಿ ಫಲ ಕಡಿಮೆ, ಕುಟುಂಬದಲ್ಲಿ ಜನಹಾನಿ, ಮಾನಭಂಗ, ರ್ಯಹಾನಿ, ಪಶುನಾಶ. ಆ ಕೇತುವು ರವಿಯಿಂದ ಕೂಡಿದರೂ ನೋಡಲ್ಪಟ್ಟರೂ ನಾಬಗೆ ವೆಚ್ಚಪ್ರಾಪ್ತಿ, ಪಿತೃವರ್ಗಕ್ಕೆ ಹಾನಿ, ತಲೆನೋವು. ಚಂದ್ರನಿಂದ ಜ್ಞಾನ ತ್ಯ, ಅಪಮೃತ್ಯು; ಕುಜನಿಂದ ಆಯುಧಗಂಡ, ಜಗಳ ; ಬುಧನಿಂದ ನೆಂಟರ ಬೆಳ ಳಿಕೆ, ವ್ಯವಹಾರದಲ್ಲಿ ಕೀರ್ತಿ ; ಗುರುವಿನಿಂದ ದೇಹ ಪುತ್ರಪೀಡೆ; ಶುಕ್ರನಿಂದ ಸ್ತ್ರೀ ಮೂಲಕ ಕಲಹ, ವಾಹನಹಾನಿ, ಗೀತಾಕಾಲಕ್ಷೇಪ; ಶನಿಯಿಂದ ಅತಿಸಾರಭೇದಿ, ಬಂಧುಹಾನಿ ; ಆ ಕೇತುವು ದಶಾಧಿಪತಿಯಾದ ಗುರುವಿಗೆ ಶುಭಸ್ಥಾನದಲ್ಲಿ ಶುಭ ಪದಿಂದ ಕೂಡಿ ಬಲವಂತನೂ ಆದರೆ ಮನೆಯಲ್ಲಿ ವಿವಾಹಾದಿ ಶುಭಕಾರ್ಯಗಳೂ ಖವೂ ಉಂಟಾಗುತ್ತೆ. ಪಾಪಸ್ಥಾನಗಳಲ್ಲಿ ಬಲಹೀನನಾದರೆ ರಂಡಾಗಮನ ಪುತ್ರವಿರೋಧ : ಮಾರಕಸ್ಥಾನದಲ್ಲಿದ್ದರೆ ಮೃತ್ಯುಭಯ. ಅದಕ್ಕೆ ಶಿವಪೂಜೆಯಂ ಡಿ ಮೇಕೆಯ ದಾನ ಮಾಡಲು ಪರಿಹಾರವು.

---

## ಗುರುದಶಾ ಶುಕ್ರಭುಕ್ತಿ ೩೨ ತಿಂಗಳಿಗೆ ಫಲ

ಗುರುದಶಾ ಶುಕ್ರಭುಕ್ತಿಯಲ್ಲಿ ಶುಕ್ರನು ಲಗ್ನಕ್ಕೆ ಶುಭಸ್ಥಾನದಲ್ಲಿ ಶುಭಯುಕ್ತ ವುಳ್ಳವನಾದರೆ ಮನಸ್ಸಿಗೆ ಸೌಖ್ಯ, ಕುಟುಂಬ ಸಂತೋಷ, ವಿದ್ಯಾಲಾಭ, ಮಕ್ಕಳಿಗೆ ದುವೆ, ರಾಜಾಶ್ರಯ, ಕೃಷಿವೃದ್ಧಿ, ಪಶುಲಾಭವಾಗುತ್ತೆ ; ದುಷ್ಟಸ್ಥಾನದಲ್ಲಿ ಬಲ ನನಾದರೆ ಅವನ ಭುಕ್ತಿಯಲ್ಲಿ ನಷ್ಟ ಕಷ್ಟಗಳಾಗುವದು ; ರವಿಸಂಬಂಧದಿಂದ ಕಾಡಿ ತಿರುಗುವವನಾಗುವನು ; ಚಂದ್ರನಿಂದ ರತ್ನ ಬಂಗಾರ ವಜ್ರ ಲಾಭ ; ಕುಜನಿಂದ ರ ಚೋರ ವಿಷಭಯ ; ಬುಧನಿಂದ ಶಾಸ್ತ್ರವಿಚಾರ, ನೆಂಟರ ಕೆಲಸ ; ಗುರುವಿನಿಂದ ಹ್ಮಣಕಾರ್ಯ, ಪರೋಪಕಾರ, ಶನಿಯಿಂದ ಚಿಂತೆ, ಸ್ಥಳಕ್ಕೆ ತೊಂದರೆ, ಪಶುಹಾನಿ ಧಿಪತಿಗೆ ದುಷ್ಟಶ್ಥಾನಗಳಲ್ಲಿ ಶುಭಗ್ರಹಗಳಿಂದ ಕೂಡಿದರೂ ಧನಲಾಭವುಂಟಾಗಿ ವಾಗುವುದು ; ಶುಭಸ್ಥಾನದಲ್ಲಿ ಶುಭ ಬಲಾಧಿಕನಾದರೆ ಅನ್ನದಾನ, ಮದುವೆ , ತೀರ್ಥಯಾತ್ರೆ, ಭೂಪ್ರಾಪ್ತಿ, ವಾಹನಲಾಭ ಉಂಟಾಗುತ್ತೆ : ದಶಾಧಿಪತಿಗೆ ೮-೧೨ ರಲ್ಲಿ ಪಾಪಗ್ರಹಗಳು ಕೂಡಿದ್ದರೆ ಯಾವ ಯತ್ನವೂ ಸಾಗುವುದಿಲ್ಲ, ಪಶು ಸ, ಪ್ರಾಣಹಾನಿ ; ಮಾರಕಲಕ್ಷಣವುಳ್ಳವನಾದರೆ ಮಾರಕಸ್ಥಾನದಲ್ಲಿದ್ದರೆ ಅಪ ತ್ಯು ಗಂಡಗಳು. ಇದಕ್ಕೆ ಲಕ್ಷ್ಮೀನಾರಾಯಣ ಪ್ರತಿಮಾದಾನದಿಂದ ಪರಿಹಾರವು.

---

## ಗುರುದಶಾ ರವಿಭುಕ್ತಿ ೯ ತಿಂಗಳು ೧೮ ದಿನಕ್ಕೆ ಫಲ

ಗುರುದಶಾ ರವಿಭುಕ್ತಿಯಲ್ಲಿ ರವಿಯು ಲಗ್ನಕ್ಕೆ ಕೇಂದ್ರ ತ್ರಿಕೋಣಾದಿ ಶುಭ ಸ್ಥಾನಗಳಲ್ಲಿ ಇಷ್ಟಫಲಾಧಿಕನಾದರೆ ಇಷ್ಟಕಾರ್ಯಸಿದ್ಧಿ ; ಯಾವ ಭಾವಾಧಿಪತಿಯಿಂದ ಕೂಡಿದರೆ ಆ ಭಾವಕ್ಕೆ ಪುಷ್ಟಿ ; ಕೇಂದ್ರತ್ರಿಕೋಣಾಧಿಪತಿಗಳಿಂದ ಕೂಡಿದರೆ ಸುಖ ಸಾಧನಲಾಭ ಹೆಚ್ಚುತ್ತೆ ; ಯಾವ ಗ್ರಹದಿಂದ ಕೂಡಿಇರುವನೋ ಅದೇ ಗ್ರಹದ ವಾರ ದಲ್ಲಿ ಕಾರ್ಯಗಳು ಅನುಕೂಲಿಸುವದು ; ಗುರು ರವಿ ಇಬ್ಬರೂ ಬಲವಂತರಾದರೆ ಮಹಾ ಸೌಖ್ಯ. ಲಗ್ನಕ್ಕೆ ದುಷ್ಟಸ್ಥಾನಗಳಲ್ಲಿ ಕಷ್ಟಫಲಾಧಿಕನಾಗಿ ಬಲಹೀನನೂ ಆಗಿ ಪಾಪ ಗ್ರಹದಿಂದಲೂ ಕೂಡಿದರೆ ನಾನಾಬಗೆ ಕಷ್ಟಗಳು ಪ್ರಾಪ್ತಿಯಾಗುವದು. ಜನಹಾನಿ ಧನಕ್ಷಯ, ಪಶುನಾಶ, ಮಾನಭಂಗ, ಕಾರ್ಯಹಾನಿ, ಸೋತುಹೋಗುವಿಕೆ ; ಶನಿ ಸಂಬಂಧವಾದರೆ ಶುಭಫಲ, ಕುಜನಿಂದ ವ್ರಣರೋಗ, ಬುಧನಿಂದ ವಿದ್ಯಾಧಿಕಾರ, ಗುರುವಿನಿಂದ ದೇವತಾರಾಧನೆ, ಶುಕ್ರನಿಂದ ಮುತ್ತಿನ ಒಡವೆ ಬರುತ್ತೆ. ಶನಿಯಿಂದ ಮನಸ್ಸಿಗೆ ವ್ಯಾಕುಲ. ದಶಾಧಿಪತಿಗೆ ಕೇಂದ್ರ ತ್ರಿಕೋಣಗಳಲ್ಲಿ ೩–೧೧ರಲ್ಲಿ ಧನಹಾನಿ, ಹೊಟ್ಟೆನೋವು ಬಂಧುದ್ವೇಷ. ಭುಕ್ತಿಯ ಕೊನೆಯಲ್ಲಿ ಶುಭ, ದಶಾಧಿಪತಿಗೆ ೬–೮–೧೨ರಲ್ಲಿದ್ದರೆ ಬಹಳ ಕಷ್ಟ, ಸ್ಥಳ ತಪ್ಪುತ್ತೆ, ಕುಟುಂಬ ಕಲಹ, ಕಾರ್ಯನಾಶ, ಬಂಧುಮರಣ. ಮಾರಕಸ್ಥಾನದಲ್ಲಿದ್ದರೆ ಅಪಮೃತ್ಯು. ಸೂರ್ಯಪ್ರಾರ್ಥನೆಯಿಂದಲೂ ಭಾಗದಾನದಿಂದಲೂ ಆರೋಗ್ಯವುಂಟಾಗುವುದು.

---

## ಗುರುದಶಾ ಚಂದ್ರಭುಕ್ತಿ ೧೬ ತಿಂಗಳಿಗೆ ಫಲ

ಗುರುದಶಾ ಚಂದ್ರಭುಕ್ತಿಯಲ್ಲಿ ಚಂದ್ರನು ಲಗ್ನಾದಿಯಾಗಿ ೧-೩-೪-೫-೭-೯ ೧೦-೧೧ ಈ ರಾಶಿಗಳಲ್ಲಿಯೂ ಉಚ್ಚ ಸ್ವಕ್ಷೇತ್ರಗಳಲ್ಲಿಯೂ ಶುಭಸಂಬಂಧ ಬಲವಂತ ನಾದರೆ ಅಧಿಕಾರಲಾಭ, ಮಾತುಬರನಾಗುವನು, ವಾಹನಲಾಭ, ಕುಟುಂಬಸೌಖ್ಯ, ಮೃಷ್ಟಾನ್ನ ಭೋಜನ, ಆರೋಗ್ಯಭಾಗ್ಯ, ರಾಜಪ್ರಸಾದ, ಮನೆಯಲ್ಲಿ ಕಲ್ಯಾಣಕಾರ್ಯ ಗಳಾಗುವದು, ಕೃಷಿವೃದ್ಧಿ. ೬-೮-೧೨ರಲ್ಲಿ ಪಾಪಯುಕ್ತನಾಗಿ ನೀಚಾದಿ ದುರ್ಬಲ ನಾದರೆ ಹುಚ್ಚು, ಧನಹಾನಿ, ದೇಹಜಾಡ್ಯ, ಪೀನಸರೋಗ, ಮೂತ್ರಕಟ್ಟು. ರವಿ ಸಂಬಂಧದಿಂದ ರಾಜದ್ವೇಷ, ಜ್ವರಪೀಡೆ. ಕುಜನಿಂದ ಜಗಳ, ಅಗ್ನಿಗಂಡ. ಬುಧ ನಿಂದ ವಾಣಿಜ್ಯಲಾಭ, ಗುರುವಿನಿಂದ ದೇವಪೂಜೆ, ಶುಕ್ರನಿಂದ ಭೂಲಾಭ, ಶನಿಯಿಂದ ಪಶುಗಂಡ, ದಶಾಧಿಪತಿಗೆ ಶುಭಸ್ಥಾನದಲ್ಲಿ ಶುಭನಾಗಿದ್ದರೆ ಶುಭಫಲ, ಕೆಟ್ಟವನಾಗಿದ್ದರೆ ಪಾಪಫಲ, ಮಾರಕಸ್ಥಾನದಲ್ಲಿದ್ದರೆ ಮೃತ್ಯುಭಯ. ಭಾಗದಾನ ಮಾಡಿದರೆ ಕ್ಷೇಮ ಉಂಟಾಗುವುದು.

## ಗುರುದಶಾ ಕುಜಭುಕ್ತಿ ೧೧ ತಿಂಗಳು ೬ ದಿನಕ್ಕೆ ಫಲ

ಗುರುದಶಾ ಕುಜಭುಕ್ತಿಯಲ್ಲಿ ಗುರುವು ಲಗ್ನಕ್ಕೆ ಕೇಂದ್ರತ್ರಿಕೋಣಾದಿ ಶುಭ ನಗಳಲ್ಲಿ ಬಲವಂತನಾಗಿದ್ದರೆ ಭೂಮಿ, ಆನೆ, ಕುದುರೆ, ಧನಲಾಭ, ಪುತ್ರ ತ್ರಾಭಿವೃದ್ಧಿ, ದಾಸೀದಾಸ್ಯಾದಿ ಸೌಖ್ಯ, ಸಂತಾನಪ್ರಾಪ್ತಿ, ದೇಹಾರೋಗ್ಯ, ರ್ಥಯಾತ್ರೆ. ಲಗ್ನಕ್ಕೆ ೬-೮-೧೨ರಲ್ಲಿ ಬಲಹೀನನಾದರೆ ಬಂದಿಖಾನೆ, ಕಾಲಿಗೆ ತಿ, ಪಿತ್ತಗುಲ್ಮರೋಗ, ಸ್ತ್ರೀಮೂಲಕ ಧನಹಾನಿ, ರವಿ ಸಂಬಂಧದಿಂದ ರಾಜ ಭಂಗ, ಚಂದ್ರನಿಂದ ಧನಲಾಭ, ಮನಸ್ಸಿಗೆ ಉಲ್ಲಾಸ, ಬುಧನಿಂದ ಗ್ರಹ ಗುರುವಿನಿಂದ ಸಂತಾನಲಾಭ, ಶುಕ್ರನಿಂದ ವಾಹನ ಧನಕನಕ ಸಮೃದ್ಧಿ, ಯಿಂದ ಪಶುಹಾನಿ; ಪ್ರಾಣಹಾನಿ, ದಶಾಧಿಪತಿಗೆ ಶುಭಸ್ಥಾನದಲ್ಲಿ ಶುಭಫಲ, ಪಸ್ಥಾನದಲ್ಲಿ ಪಾಪಫಲ, ಮಾರಕಸ್ಥಾನದಲ್ಲಿ ಮೃತ್ಯು, ಅದಕ್ಕೆ ಸುವರ್ಣದಾನವು ಹಾರಮಾಡುವದು.

---

## ಗುರುದಶಾ ರಾಹುಭುಕ್ತಿ ೨೮ ತಿಂಗಳು ೨೪ ದಿನಕ್ಕೆ ಫಲ

ಗುರುದಶಾ ರಾಹುಭುಕ್ತಿಯಲ್ಲಿ ರಾಹು ಪಾಪಯುಕ್ತನಾಗಿ ಕೇಂದ್ರತ್ರಿಕೋಣ ಲ್ಲಿದ್ದರೆ ವ್ಯತಿರಿಕ್ತವಾದ ಫಲವನ್ನು ಕೊಡುವನು ಅಂದರೆ, ಜಗಳ, ಜನವಿರೋಧ, ಧಾನ್ಯಹಾನಿ, ರಂಡಾಕ್ಲೇಶ. ಶುಭಯುಕ್ತನಾದರೆ ಸುಖದುಃಖ ಮಿಶ್ರಫಲ, ೋದರ ವಿರೋಧ, ಲಗ್ನಕ್ಕೆ ಶುಭಸ್ಥಾನದಲ್ಲಿ ಪಾಪಯುಕ್ತನಾದರೂ ಮಿಶ್ರಫಲ: ಸಂಬಂಧದಿಂದ ಕಳ್ಳರಕಾಟ ; ಚಂದ್ರನಿಂದ ಮಾತೃವರ್ಗಹಾನಿ, ವಿದೇಶೂಲೆ : ನಿಂದ ರೋಗ ಆಪತ್ತು ಬುಧನಿಂದ ಸೋದರಮಾವನಿಗೆ ಭಯ, ಗುರುವಿನಿಂದ ುಂಬಜನಪೀಡೆ; ಶುಕ್ರನಿಂದ ಕಳತ್ರಗಂಡ, ಶನಿಯಿಂದ ಸೇವಕರಿಗೆ ನಾಶ : ಧಿಪತಿಗೆ ಕೇಂದ್ರತ್ರಿಕೋಣಗಳಲ್ಲಿದ್ದರೆ ಶುಭ, ೩-೧೧ರಲ್ಲಿ ಶುಭಯುಕ್ತನಾದರೆ ಾಯದಿಂದ ಲಾಭ; ವಸ್ತುಲಾಭ; ಇಷ್ಟಸಿದ್ಧಿ; ದಶಾಧಿಪತಿಗೆ ೬-೮-೧೨ರಲ್ಲಿ ಯುಕ್ತನಾದರೆ ಸ್ಥಾನನಾಶ; ಅಸತ್ಯ, ಪಾಪಚಿಂತೆ, ರಾಜಭಯ, ಜಗಳ, ಹಾನಿ, ಗುರುದ್ವೇಷ; ಮಾರಕಸ್ಥಾನದಲ್ಲಿದ್ದರೆ ಅಪಮೃತ್ಯುಭಯ. ಇದಕ್ಕೆ ಹೋಮಮಾಡಿ ಬೆಳ್ಳಿ ದಕ್ಷಿಣೆಯಿಟ್ಟು ಒಳ್ಳೆ ಎಮ್ಮೆಯುಂ ದಾನಮಾಡುವುದರಿಂದ ೋಗ್ಯವುಂಟಾಗುವುದು.

---

## ಶನಿದಶಾ ೧೯ ವರ್ಷಕ್ಕೆ ಫಲ

ಶನಿದಶಾಕಾಲದಲ್ಲಿ ಜಾತಕನು ನಿಂದೆಯನ್ನು ಹೊರಿಸಲ್ಪಡುವನು; ಶತ್ರುಭಯ ರಾಜಪೀಡೆ, ಅಗ್ನಿಭಯ, ಕ್ಷೇತ್ರನಾಶ, ಸ್ಥಾನಭ್ರಂಶತೆ, ಮಾನಭಂಗ, ಕುಟುಂಬ ರೋಗ, ಧನಹಾನಿ, ಚಿಂತೆ ಇತ್ಯಾದಿ ಕಷ್ಟಫಲಗಳು ಸಾಧಾರಣವಾಗಿ ಸಂಭವಿಸ ತಕ್ಕವುಗಳಾಗಿರುತ್ತೆ : ಆದೇ ಶನಿಯು ಜಾತಕನಿಗೆ ಶುಭಬಲಯುಕ್ತನಾಗಿದ್ದರೆ ಆ ಶನಿ ದೆಶೆಯಲ್ಲಿಯೇ ಶುಭಫಲಗಳು ಆಗುವದು : ಮಿತ್ರನಾಗಿದ್ದರೆ ಮಿಶ್ರಫಲಗಳಾಗುವದು ಹೇಗೆಂದರೆ:—ಶನಿಗೆ ಸ್ಥಾನಬಲವಿದ್ದರೆ ಕುಟುಂಬ ವೃದ್ಧಿ, ಹೆಸರುವಾಸಿ ಉಂಟಾಗು ವದು, ಅವನಿಗೆ ಕೆಟ್ಟ ಆಧಿಪತ್ಯವಿದ್ದರೆ ರಾಜ, ಚೋರಾಗ್ನಿ ಭಯವು, ಕುಟುಂಬ ಹಾನಿಯೂ, ಕಣ್ಣಿಗೂ ಗುದಕ್ಕೂ ರೋಗವು ಉಂಟಾಗುವದು. ಹೀಗೆ ಶನಿಯಿಂದ ಆಗುವ ಶುಭತ್ವದ ಫಲವು ಸಹ ತಿಳಿಸಲ್ಪಡುತ್ತೆ, ದಿಗ್ಬಲವಿದ್ದರೆ ಸುಖಕೀರ್ತಿ ಗಳುಂಟು, ಪಾಪಫಲವಾದರೆ ಸೋದರ ಹಾನಿ, ನಷ್ಟಕಾಲ ಬಲವಿದ್ದರೆ ವಿಷಗಂಡ. ನಷ್ಟಕೃಷಿಲಾಭ, ವಕ್ರಚಾರವಲ್ಲಿ ಫಲಭಂಗ, ಕ್ರೂರಷಷ್ಟ್ಯಂಶವಿದ್ದರೆ ರಾಜಶಿಕ್ಷೆ, ಸೌಮ್ಯಷಷ್ಟ್ಯಂಶದಲ್ಲಿ ಕುಟುಂಬ ಸೌಖ್ಯ, ಕ್ರೂರದ್ರೇಕ್ಕಾಣದಲ್ಲಿ ಆತ್ಮಹತ್ಯೆ, ಮರಣ ದೋಷ, ನೀಚದಲ್ಲಿ ಉಚ್ಚಾಂಶನಾದರೆ ದೆಶೆಯ ಆದಿಯಲ್ಲಿ ಕಷ್ಟ, ಕಡೆಗೆ ಸೌಖ್ಯ, ಉಚ್ಚರಾಶಿ ನೀಚಾಂಶದಲ್ಲಿದ್ದರೆ ಆದಿಯಲ್ಲಿ ಸುಖ, ಕಡೆಯಲ್ಲಿ ಕಷ್ಟ, ಮೂಲ ತ್ರಿಕೋಣದಲ್ಲಿ ಧನ ಪಶು ವಾಹನ ಲಾಭ, ಸ್ವಕ್ಷೇತ್ರದಲ್ಲಿ ಭಾಗ್ಯಯೋಗ, ಅತಿಮಿತ್ರ ಕ್ಷೇತ್ರದಲ್ಲಿ ಸಂಚಾರ ಧನಲಾಭ, ಅತಿ ಶತ್ರುಕ್ಷೇತ್ರದಲ್ಲಿ ದುಃಖ ಕಷ್ಟ ನೆಂಟರಿಗೆ ಹಾನಿ, ರವಿಯೊಡಗೂಡಿದ್ದರೆ ಪರಸ್ತ್ರೀವ್ಯಸನ, ಜನದ್ವೇಷ. ಶುಭದೃಷ್ಟಿಯಿದ್ದರೆ ಶುಭ ವಾಗುತ್ತೆ. ಪಾಪದೃಷ್ಟಿಯಿಂದ ನಷ್ಟಕಷ್ಟಗಳುಂಟಾಗುವದು.

---

## ಶನಿದಶಾ ಶನಿಭುಕ್ತಿ ೩೬ ತಿಂಗಳು ೩ ದಿನಕ್ಕೆ ಫಲ

ಶನಿದಶಾ ಶನಿಭುಕ್ತಿಯಲ್ಲಿ ಜನ್ಮಕಾಲದಲ್ಲಿ ಶನಿಯು ಲಗ್ನಕ್ಕೆ ತ್ರಿಕೋಣ ೩–೧೧ ಉಚ್ಚ ಇವುಗಳಲ್ಲಿದ್ದರೆ ವಾಹನ, ಧನ, ಪಶು, ಧಾನ್ಯಲಾಭ, ರಾಜಪ್ರೀತಿ ಕಾರ್ಯಾನುಕೂಲ, ವಸ್ತ್ರಾಭರಣ, ಪಡುವಲದಿಕ್ಕಿಗೆ ಪ್ರಯಾಣ, ಶೂದ್ರಪ್ರಭುವಿನಿಂದ ಸೌಖ್ಯ, ಕಷ್ಟಒಡವೆ, ಜಯ, ಆರೋಗ್ಯ ಇತ್ಯಾದಿ ಶುಭಫಲಗಳಾಗುವವು. ಆ ಶನಿಯು ರವಿಯೊಡಗೂಡಿದರೂ ನೋಡಲ್ಪಟ್ಟರೂ ತಲೆನೋವು, ಜ್ಞಾನವೈಕಲ್ಯ ಉದ್ಯೋಗಕ್ಕೆ ಭಂಗ, ದೊಡ್ಡವರೊಡನೆ ದ್ವೇಷ, ಸರಕಾರದ ತೊಂದರೆ: ಚಂದ್ರ ನಿಂದ ತಾಯಿ ಕಡೆಯವರಿಗೆ ಹಾನಿ, ದುಃಖ, ಕಾರ್ಯಭಂಗ, ಕುಜನಿಂದ ಜಗಳ ದಲ್ಲಿ ಅಪಜಯ, ರೋಗಪೀಡೆ; ಬುಧನಿಂದ ವಿದ್ಯೆ, ಧನ, ನೆಂಟರ ಸೌಖ್ಯ,

ರ್ಯಾನುಕೂಲ; ಗುರುವಿನಿಂದ ಪುತ್ರವರ್ಗಕ್ಕೆ ಭಯು. ಕುಟುಂಬಕ್ಲೇಶ, ಧನ ಹಾನಿ, ವ್ಯಸನ; ಶುಕ್ರನಿಂದ ಕಳತ್ರಗಂಡ, ಸಂತಾನವಿಘ್ನ, ಸ್ತ್ರೀ ಕಲಹ, ಗುಹ್ಯ ವ್ಯಾಧಿ; ಅಷ್ಟಮಾಧಿಪತಿಯಿಂದಲೂ, ಅಷ್ಟಮದಲ್ಲಿಯೂ ೭-೮ರಲ್ಲಿಯೂ ಅಪ ಮೃತ್ಯುಭಯ, ಅದಕ್ಕೆ ಮೃತ್ಯುಂಜಯಜಪವನ್ನೂ ತಿಲದಾನವನ್ನೂ ಕರೇ ಆಕಳ ದಾನವನ್ನೂ ಮಾಡಿದರೆ ಶಾಂತಿ ಉಂಟಾಗುವದು.

———

## ಶನಿದಶಾ ಬುಧಭುಕ್ತಿ ೩೨ ತಿಂಗಳು ೯ ದಿನಕ್ಕೆ ಫಲ

ಶನಿದಶಾ ಬುಧಭುಕ್ತಿಯಲ್ಲಿ ಬುಧನು ಲಗ್ನಕ್ಕೆ ಶುಭಸ್ಥಾನಗಳಲ್ಲಿದ್ದರೆ ಮದುವೆ ಕಾರ್ಯ, ಭಾಗ್ಯ, ವಿದ್ಯೆ, ಧನಲಾಭ, ವಸ್ತ್ರಾಭರಣಸಂಗ್ರಹ, ಪ್ರಭುದರುಶನ, ಬೇಕಾದ್ದು ಕೈಗೂಡುವಿಕೆ, ವ್ಯಾಪಾರ ವೃದ್ಧಿ, ಜಗಳದಲ್ಲಿ ಜಯ, ದೇವರ ಕೆಲಸ, ಕುಟುಂಬ ಸೌಖ್ಯ, ಆರೋಗ್ಯ ಪ್ರಜಾವೃದ್ಧಿ ಇವುಗಳುಂಟಾಗುತ್ತೆ. ಬುಧನು ಲಗ್ನಕ್ಕೆ ಪಾಪಸ್ಥಾನಗಳಲ್ಲಿದ್ದರೆ ನೆಂಟರೊಡನೆ ಜಗಳ, ಹೆಂಗಸರ ಜಗಳ. ಬಡಗಲಲ್ಲಿ ಹಗೆಯರ ಭಯ, ಮಾಡಿದ ಕೆಲಸವೆಲ್ಲ ಕೇಡು, ನಷ್ಟಕಷ್ಟಗಳು, ಮಾತೃವರ್ಗಕ್ಕೆ ಪೀಡೆ, ಆ ಬುಧನೊಡನೆ ಕೂಡಿದ್ದ ಗ್ರಹಗಳ ಫಲವೂ ಭುಕ್ತಿಫಲದಲ್ಲಿ ಸೇರಿ ರುತ್ತೆ. ರವಿಯಿಂದ ನೆಂಟರಿಗೆ ಪ್ರೀತಿ, ಚಂದ್ರನಿಂದ ಒಡವೆಗಳು ಬರುವದು. ಕುಜ ಸೇರಿದ್ದರೆ ಹಗೆ ಹೆಚ್ಚು, ಗುರುವಿನಿಂದ ಶಾಸ್ತ್ರ ವಿಚಾರ, ಶುಕ್ರನಿಂದ ಸವಾರಿ ಉಡುಪು; ಶನಿಯಿಂದ ಮೈಗೆ ಬೇನೆ, ಜಗಳ. ಬುಧನು ದಶಾಧಿಪತಿಗೆ ಶುಭಸ್ಥಾನ ಗಳಲ್ಲಿದ್ದರೆ ಸಂಪತ್ತು, ಸುಖ, ಶೂದ್ರರಿಂದ ಧನಲಾಭ, ಗ್ರಾಮಾಧಿಕಾರ, ದಶಾಧಿ ಪತಿಗೆ ಕ್ರೂರಸ್ಥಾನದಲ್ಲಿದ್ದರೆ ಕೆಟ್ಟಯೋಚನೆ, ಜಗಳ, ನೆಂಟರಿಗೆ ಹಾನಿ, ಪರಸ್ಥಳ ಪ್ರಯಾಣ, ೭-೮ರಲ್ಲಿ ಅಪಮೃತ್ಯು ಇದಕ್ಕೆ ಮಹಿಷೀ ದಾನ ಮಾಡುವದ್ದರಿಂದ ಶಾಂತಿ.

———

## ಶನಿದಶಾ ಕೇತುಭುಕ್ತಿ ೧೩ ತಿಂಗಳು ೯ ದಿನಕ್ಕೆ ಫಲ

ಶನಿದಶಾ ಕೇತುಭುಕ್ತಿಯಲ್ಲಿ ಸರ್ಕಾರಕ್ಕೆ ದಂಡ ತೆರುವದು, ಕೆಲಸಕೇಡು, ಪಶು ಹಾನಿ, ನೆಂಟರ ಜಗಳ, ಕುಟುಂಬ ಪೀಡೆ, ಪ್ರಯಾಣದಲ್ಲಿ ಕಾರ್ಯಭಂಗ, ನೀಚ ಸಹವಾಸ, ಕಷ್ಟನಷ್ಟಗಳು, ಮಾನಹಾನಿ, ಬುದ್ಧಿ ಕೆಡುತ್ತೆ, ರೋಗಪೀಡೆ, ಹೆಸರು ಕೇಡು ಇವುಗಳುಂಟಾಗುವದು. ದಶಾಧಿಪತಿಗೆ ಶುಭಸ್ಥಾನದಲ್ಲಿದ್ದರೆ ಕಷ್ಟ ಹೆಚ್ಚು. ಪಾಪಸ್ಥಾನದಲ್ಲಿದ್ದರೆ ಸುಖ ಹೆಚ್ಚು. ವಾಹನಲಾಭ, ಧನಧಾನ್ಯ ಸಮೃದ್ಧಿ, ಆ ಕೇತು ವಿನೊಡಗೂಡಿದ ಅಥವಾ ನೋಡಿದ ರವಿಯಿಂದ ಸ್ಥಾನಪಲ್ಲಟ, ಅಧಿಕಾರ ಬದಲಾ ವಣೆ. ಚಿಂತೆ, ಕಾರ್ಯಹಾನಿ, ರೋಗಭಯ. ಚಂದ್ರನಿಂದ ಸುಖಭೋಜನ,

ಕುಜನಿಂದ ಧನಧಾನ್ಯವ್ಯಯು, ಶತ್ರುಭಯು, ಬುಧನಿಂದ ವಿದ್ಯಾವೃದ್ಧಿ, ಕಾರ್ಯಸಿದ್ಧಿ ಗುರುವಿನಿಂದ ಪುತ್ರಹಾನಿ, ಬ್ರಾಹ್ಮಣವಿರೋಧ, ಧನವ್ಯಯು, ಶುಕ್ರನಿಂದ ವಸ್ತ್ರ ವಾಹನಲಾಭ, ನಿಕ್ಷೇಪಪ್ರಾಪ್ತಿ, ಶನಿಯಿಂದ ಕುಟುಂಬಹಾನಿ, ರೋಗ ಪೀಡೆ. ದಶಾಧಿಪತಿಗೆ ಶುಭಸ್ಥಾನದಲ್ಲಿ ಕುಟುಂಬ ಸೌಖ್ಯ, ಧನವಾಹನಲಾಭ. ಪಾಪ ಸ್ಥಾನಗಳಲ್ಲಿ ಕುಟುಂಬಹಾನಿ, ವಿವಾದ, ಕಲಹ ೨-೭ ರಲ್ಲಿ ಅಪಮೃತ್ಯು. ಇದಕ್ಕೆ ಪರಿಹಾರವು ಮೃತ್ಯುಂಜಯು ಪೂಜೆಯುನ್ನು ಮಾಡಿ, ಸುವರ್ಣ, ತಿಲ ದಾನ ಗಳು ಮಾಡಿದರೆ ಪರಿಹಾರವಾಗುವದು.



## ಶನಿದಶಾ ಶುಕ್ರಭುಕ್ತಿ ೩೮ ತಿಂಗಳಿಗೆ ಫಲ

ಶನಿದಶಾ ಶುಕ್ರಭುಕ್ತಿಯಲ್ಲಿ ಶುಕ್ರನು ಲಗ್ನಕ್ಕೆ ಶುಭಸ್ಥಾನದಲ್ಲಿ ಶುಭಬಲ ರಹಿತ ನಾದನೆ ಪ್ರಸ್ತುತ ಪ್ರಯೋಜನವೂ, ಜಯುವೂ, ಸಂತಾನವೃದ್ಧಿಯೂ, ಬಂಧ ಸಂತೋಷವೂ, ವಸ್ತ್ರಾಭರಣಕೀರ್ತಿಯೂ, ಕುಟುಂಬ ಸೌಖ್ಯವೂ, ಅಧಿಕಾರ ಲಾಭವೂ, ಭೋಗವೃದ್ಧಿಯೂ, ಶುಭ ಫಲವೂ, ಸಂತೋಷವೂ ಉಂಟಾಗುತ್ತೆ, ಶುಕ್ರನು ಲಗ್ನಕ್ಕೆ ೬-೮-೧೨ ರಲ್ಲಿಯೂ, ನೀಚರಾಶಿಯಲ್ಲಿಯೂ ಇದ್ದರೆ ಕಲಹ, ಧನ ಹಾನಿ, ಸ್ವಜನವಿರೋಧ, ಕಾರ್ಯಹಾನಿ, ನಷ್ಟಕಷ್ಟಗಳು, ಅಪಕೀರ್ತಿ, ರೋಗ ಕ್ರೂರಗ್ರಹ ಸಂಬಂಧವಿದ್ದರೆ ಸ್ತ್ರೀಯರಿಗೆ ಹಾನಿ. ನೀಚಸಂಬಂಧ ಭುಕ್ತಿನಾಥನಿಗೆ ರವಿಸಂಬಂಧದಿಂದ ವೀರ್ಯಶೋಷಣ, ಪ್ರಭುವಿರೋಧ, ಕಳತ್ರಭಂಗ, ಚಿಂತೆ ಚಂದ್ರನಿಂದ ರತ್ನಾಭರಣ ವಾಹನ ಲಾಭ, ಕುಜನಿಂದ ಗುಹ್ಯರೋಗ. ದಾಯಾದಿ ವ್ಯಾಜ್ಯ, ಬುಧನಿಂದ ಕಲ್ಯಾಣಕಾರ್ಯ, ಬುದ್ಧಿ ಸೌಖ್ಯ. ಗುರುವಿನಿಂದ ಕೊಟ್ಟಿದ್ದ ಒಡವೆ ಬರುತ್ತೆ, ಸತ್ಕಾರ್ಯ, ಶನಿಯಿಂದ ಕಳತ್ರ ವರ್ಗಕ್ಕೆ ಹಾನಿ, ಶುಕ್ರವಾರದಲ್ಲಿ ಕಷ್ಟಪ್ರಾಪ್ತಿ, ದಶಾಧಿಪತಿಗೆ ಕೇಂದ್ರತ್ರಿಕೋಣ ೩-೧೧ರಲ್ಲಿ ಶುಭಗ್ರಹದಿಂದ ಕೂಡಿ ಯಿದ್ದರೆ ಪ್ರಭುಪ್ರೀತಿ. ಅತಿಸೌಖ್ಯ, ಧನಧಾನ್ಯ, ಪಶುಸಮೃದ್ಧಿ, ತೀರ್ಥಸ್ನಾನ, ಕಾರ್ಯಾನುಕೂಲ, ಶುಕ್ರನು ದಶಾಧಿಪತಿಗೆ ೬-೮-೧೨ ರಲ್ಲಿ ದುಷ್ಟಗ್ರಹ ಸಂಬಂಧನಾಗಿ ದ್ದರೆ ಕೈಗೆ ಬಂದದ್ದು ತಪ್ಪಿಹೋಗುತ್ತೆ, ಮಾಡಿದ್ದೆಲ್ಲ ವ್ಯರ್ಥವಾಗುತ್ತೆ, ಹೇಳಿದ್ದೆಲ್ಲ ಜಗಳ, ನಿಂತಕಡೆ ನಿಲ್ಲುವುದಿಲ್ಲ, ಹೆಂಗಸರಿಂದ ಕೇಡು, ಅಪಮಾನ, ಕಷ್ಟ, ೨-೭ ರಲ್ಲಿದ್ದರೆ ಅಪಮೃತ್ಯು. ಇದರ ಪರಿಹಾರಕ್ಕೆ ೫ ಭಾಗ ದಾನಮಾಡಲು ಗುಣ ಉಂಟಾ ಗುವುದು.

---

## ಶನಿದಶಾ ರವಿಭುಕ್ತಿ ೧೧ ತಿಂಗಳು ೧೨ ದಿನಕ್ಕೆ ಫಲ

ಶನಿದಶಾ ರವಿಭುಕ್ತಿಯಲ್ಲಿ ರವಿಯು ಜನ್ಮಕಾಲದಲ್ಲಿ ಲಗ್ನಕ್ಕೆ ೪-೭-೧೦-೫-೯-೧೧ರಲ್ಲಿಯೂ ೩ ರಲ್ಲಿಯೂ ಉಚ್ಚವಲ್ಲಿಯೂ ಬಲವಂತನಾಗಿದ್ದರೆ ಸರಕಾರದ ಕೆಲಸ

ದೊರೆಯುತ್ತೆ, ಅಧಿಕಾರಜೀವನ, ಮಿತ್ರಲಾಭ, ಸ್ವಲ್ಪವಾದ ಆಭರಣಲಾಭ, ಉಭಯ ಗ್ರಹಗಳಿಗೂ ಬಲಾಧಿಕ್ಯವಿದ್ದರೆ ಶನಿವಾರದಲ್ಲಿ ಪ್ರಭುಪ್ರಸಾದ, ರಾಜಸನ್ಮಾನ, ಜಗಳ ದಲ್ಲಿ ಜಯ. ಆ ಶನಿಯು ಪಾಪಸಂಬಂಧಿಯಾದರೆ ಆ ಫಲವು ದುಃಖಮಿಶ್ರವಾಗುತ್ತೆ, ಶುಭದೃಷ್ಟಿ ಇದ್ದರೆ ಕಾರ್ಯಸಿದ್ಧಿ, ಆರೋಗ್ಯ ಅಂಕಿತ ಪದ್ಯ ಕವಿತ್ವ, ಲಗ್ನಕ್ಕೆ ೬-೮-೧೨ ರಲ್ಲಿಯೂ ನೀಚದಲ್ಲಿಯೂ ಇದ್ದರೆ ಸೆಂಟರ ಬಾಧೆ, ಹಗೆಗಳ ಕಾಟ, ಕುಲಾಚಾರದ ಜಗಳ, ಕಾಲನಡೆಗಳ ಹಾನಿ. ದೇಹಾಲಸ್ಯ, ಬುದ್ಧಿಮಂಕು, ಅರಮನೆ ಕೆಲಸ ಕೇಡು. ಭುಕ್ತಿನಾಥನೊಡನೆ ಸೇರಿದ ಚಂದ್ರನಿಂದ ಬುದ್ಧಿ ಭ್ರಾಂತಿ, ಅತಿಸಾರರೋಗ, ಕುಜ ನಿಂದ ಜ್ವರ, ಸ್ಫೋಟಕ, ಸಿಡುಬು, ಆಯುಧಗಂಡ, ನೀಚರ ಜಗಳ, ಮರೆವು, ನಷ್ಟ ಕಷ್ಟಗಳು, ಬುಧನಿಂದ ಪ್ರಯಾಣ, ಬುಧವಾರದಲ್ಲಿ ವರ್ತಕನಿಂದ ಲಾಭ ಗುರುವಿನಿಂದ ಸಂತಾನ ಸೌಖ್ಯ ಭಂಗ, ಶುಕ್ರನಿಂದ ಪಶುಲಾಭ, ವಸ್ತ್ರಾಭರಣ ಸೌಖ್ಯ ಶನಿಯಿಂದ ಪಿತೃ ಭೃತ್ಯ ಧಾನ್ಯಹಾನಿ. ದಶಾಧಿಪತಿಗೆ ಶುಭಸ್ಥಾನಗಳಲ್ಲಿ ಧನ ಧಾನ್ಯ ಸೌಖ್ಯ, ಜಯ, ಕೀರ್ತಿ ಪುಣ್ಯಲಾಭ, ಮೂಡಲಿಗೆ ಪ್ರಯಾಣ, ಕಲಹಾರಂಭ, ಕುಟುಂಬಸೌಖ್ಯ, ಕಾರ್ಯಾನುಕೂಲ. ದಶಾಧಿಪತಿಗೆ ಕ್ರೂರಸ್ಥಾನಗಳಲ್ಲಿ ಪಾಪಗ್ರಹ ಸಂಬಂಧವಿದ್ದರೆ ಗ್ರಹಶೀಲಕ್ಕೆ ತಕ್ಕ ಪೀಡೆ, ಪಶುಗಂಡ, ಶತ್ರುಭಯ. ೨-೭ರಲ್ಲಿ ಇದ್ದರೆ ಅಪಮೃತ್ಯುಭಯ. ಇದಕ್ಕೆ ಸೂರ್ಯಪ್ರಾರ್ಥನೆ ಮಾಡಿ ಕುಂಬಳಕಾಯಿಯಲ್ಲಿ ಚಿನ್ನ ವನ್ನಿಟ್ಟು ದಾನಮಾಡಿದರೆ ಶುಭವಾಗುವುದು.

-----

## ಶನಿದಶಾ ಚಂದ್ರಭುಕ್ತಿ ೧೬ ತಿಂಗಳಿಗೆ ಫಲ

ಶನಿದಶಾ ಚಂದ್ರಭುಕ್ತಿಯಲ್ಲಿ ಚಂದ್ರನು ಗುರುವಿನಿಂದ ನೋಡಲ್ಪಟ್ಟು ಅಥವಾ ಶುಕ್ರಗ್ರಹದಿಂದಲಾದರೂ ಕೂಡಿದ್ದರೆ ರಾಜ್ಯಲಾಭವಾಗುವದು, ಪ್ರಭುದರುಶನ, ಸುಖ ವೃದ್ಧಿ, ಅಧಿಕಾರಲಾಭ, ಮಾತಾಪಿತೃವರ್ಗ ಸೌಖ್ಯ. ಲಗ್ನಕ್ಕೆ ೬-೮-೧೨ರಲ್ಲಿಯೂ ನೀಚದಲ್ಲಿಯೂ ಇದ್ದರೂ ಕ್ಷೀಣನಾದರೂ ಪಾಪಗ್ರಹದಿಂದ ಕೂಡಿದರೂ ಕ್ರೂರಕ್ಷೇತ್ರ ದಲ್ಲಿ ಇದ್ದರೂ ಅಂಥಾ ಚಂದ್ರಭುಕ್ತಿಯಲ್ಲಿ ಬಹಳ ಕಷ್ಟವು, ರಾಜಕೋಪ, ಧನಹಾನಿ, ಮಾತಾಪಿತೃವರ್ಗದಲ್ಲಿ ವಿಯೋಗ, ಕುಟುಂಬಹಾನಿ, ಮಿತ್ರಹಾನಿ, ದೇಹಾಯಾಸ. ರವಿಸಂಬಂಧವಾದರೆ ಶಿರೋವ್ಯಾಧಿ, ಪಿತೃವರ್ಗದೊಡನೆ ವಿರೋಧ, ಕುಜನಿಂದ ಕಲಹ ಭಯ, ದಾಯಾದಿಗಳ ಹಗೆ. ಬುಧನಿಂದ ಧರ್ಮಬುದ್ಧಿ, ಗುರುವಿನಿಂದ ವಾಹನಲಾಭ ಕಲ್ಯಾಣಕಾರ್ಯ, ಇಷ್ಟಸಿದ್ಧಿ, ಪ್ರಭುಪ್ರೀತಿ. ಶುಕ್ರನಿಂದ ಮೃಷ್ಟಾನ್ನಭೋಜನ, ಅಧಿ ಕಾರಲಾಭ, ಶನಿಯಿಂದ ವಾಯುರೋಗ, ಭೃತ್ಯ ಪಶುವರ್ಗಹಾನಿ, ನೀಚರ ಜಗಳ ದಶಾಧಿಪತಿಗೆ ಶುಭಸ್ಥಾನದಲ್ಲಿ ಶುಭಬಲಯುಕ್ತನಾದರೆ ಚಿತ್ರವಸ್ತ್ರಲಾಭ, ಧನಧಾನ್ಯ ಸಂಗ್ರಹ, ಪಂಡಿತ ಸಹವಾಸ, ತೀರ್ಥಯಾತ್ರೆ, ದೂರವಾರ್ತಾಶ್ರವಣ, ನಾನಾಬಗೆಯಿಂದ

ಪಣ ಬರುತ್ತೆ, ಕಾರ್ಯಾನುಕೂಲ. ದಶಾಧಿಪತಿಗೆ ೮-೮-೧೨ರಲ್ಲಿ ಪಾಪಗ್ರಹಯುಕ್ತನಾದರೆ ದೂರಪ್ರಯಾಣ, ಕಾರ್ಯಭಂಗ, ಬಂಧುವಿರೋಧ, ಅರ್ಥಹಾನಿ, ಪಶುನಾಶ, ಚಿಂತೆ ೨-೭ರಲ್ಲಿದ್ದರೆ ಅಪಮೃತ್ಯು. ಇದರ ಪರಿಹಾರಕ್ಕಾಗಿ ಬಿಳಿಯ ಆಕಳನ್ನು ದಾನ ಮಾಡಿದರೆ ಸುಖವುಂಟಾದೀತು.

—

## ಶನಿದಶಾ ಕುಜಭುಕ್ತಿ ೧೩ ತಿಂಗಳು ೯ ದಿನಕ್ಕೆ ಫಲ

ಶನಿದಶಾ ಕುಜಭುಕ್ತಿಯಲ್ಲಿ ಕುಜನು ಲಗ್ನಕ್ಕೆ ಕೇಂದ್ರತ್ರಿಕೋಣ ೩-೧೧ ಉಚ್ಚ ಸ್ವಕ್ಷೇತ್ರ ಇವುಗಳಲ್ಲಿದ್ದರೆ ಜ್ಞಾತಿಗಳಿಗೆ ವೃದ್ಧಿ, ಸಹೋದರರಿಗೆ ಹಾನಿ, ದಾಯಾದಿ ವ್ಯಾಜ್ಯ, ಚಿತ್ತಭ್ರಾಂತಿ, ದೇಶಾಂತರ ಗಮನ, ಸ್ವಜನವಿರೋಧ, ಬೇಡಿ, ಬಂದೀಖಾನೆ, ಕುಟುಂಬಪೀಡೆ, ಪ್ರಭುಭಯ, ಕಲಹ ಕೃಷಿಹಾನಿ. ಲಗ್ನಕ್ಕೆ ೬-೮-೩-೧೧ ರಲ್ಲಿ ಬಲಿಷ್ಟನಾದರೂ ಅಂಥಾ ಕುಜನಿಂದ ರಾಜಸ್ನೇಹ, ಧನಧಾನ್ಯಸೌಖ್ಯ, ಇಷ್ಟಕಾರ್ಯಸಿದ್ಧಿ ಐಶ್ವರ್ಯಲಾಭ ; ಮಂಗಳವಾರದಲ್ಲಿ ಕಾರ್ಯಾನುಕೂಲ, ಸೋದರವೃತ್ತಿ, ಜ್ಞಾತಿಭಂಗ, ಪಶುವೃದ್ಧಿ, ಅಂಥಾ ಕುಜನೊಡನೆ ಸೇರಿದ ರವಿಯಿಂದ ಸೋದರ ಮರಣ, ಆಪತ್ತು, ಮಾನಭಂಗ ; ಚಂದ್ರನಿಂದ ಸ್ತ್ರೀಲಾಭ, ಪುತ್ರಪ್ರಾಪ್ತಿ, ಭೋಗ; ಬುಧನಿಂದ ಮನೆ ಕಟ್ಟುವಿಕೆ, ಶಿಲ್ಪಿಕಾರ್ಯ, ವೈಭವ; ಗುರುವಿನಿಂದ ಪುತ್ರಪೀಡೆ, ಧನಹಾನಿ, ಬುದ್ಧಿ ಸ್ವಾಧೀನ ತಪ್ಪುವಿಕೆ, ಅಧಿಕಾರಭಂಗ. ಶುಕ್ರನಿಂದ ಸ್ತ್ರೀಭೋಗವಿಶೇಷ, ಮನೆಯಲ್ಲಿ ಕಲ್ಯಾಣಕಾರ್ಯ, ಊಟ ಉಡುಗರೆಯ ಸೌಖ್ಯ ; ಶನಿಯಿಂದ ನೀಚಸೇವೆ, ಉದ್ಯೋಗಕ್ಕೆ ಚಲನ ; ದಶಾಧಿಪತಿಗೆ ಕೇಂದ್ರ ತ್ರಿಕೋಣಗಳಲ್ಲಿಯೂ ಉಪಚಯದಲ್ಲಿಯೂ ಕುಜನು ಬಲವಂತನಾದರೆ ಸ್ತ್ರೀ ಪುತ್ರಸೌಖ್ಯ, ಮನಸ್ಸಿಗೆ ಉತ್ಸಾಹ, ಭೂಲಾಭ, ಧನ ಧಾನ್ಯ ಪಶುವೃದ್ಧಿ, ಕಾರ್ಯಸಿದ್ಧಿ, ಆರೋಗ್ಯ; ದಶಾಧಿಪತಿಗೆ ಕ್ರೂರಸ್ಥಾನಗಳಲ್ಲಿದ್ದರೆ ಅಪಕೀರ್ತಿ, ಭಯ, ಮಾನಹಾನಿ, ಕಳ್ಳರಿಂದಲೂ ಬೆಂಕಿಯಿಂದಲೂ ಹಗೆಗಳಿಂದಲೂ ಸ್ಥಾನಹಾನಿ, ಕಾರ್ಯಭಂಗ, ಆಯುಧಗಂಡ; ೨-೭ರಲ್ಲಿದ್ದರೆ ಅಪಮೃತ್ಯು ಭಯ. ಇದರ ಪರಿಹಾರಕ್ಕಾಗಿ ಎಮ್ಮೆಯ ದಾನವನ್ನು ಮಾಡಿದರೆ ಸುಖವುಂಟುದೀತು.

— —

## ಶನಿದಶಾ ರಾಹುಭುಕ್ತಿ ೩೪ ತಿಂಗಳು ೬ ದಿನಕ್ಕೆ ಫಲ

ಶನಿದಶಾ ರಾಹುಭುಕ್ತಿಯಲ್ಲಿ ಜಗಳ, ಮನಸ್ಸಿಗೆ ವ್ಯಸನ. ಲಗ್ನಾಧಿಪತಿ ಕೂಡಿದ್ದರೆ ಭುಕ್ತಿಯ ಆರಂಭದಲ್ಲಿ ಧನ ಬರುತ್ತೆ, ಮಧ್ಯಕಾಲದಲ್ಲಿ ಮರಣವಾರ್ತೆ ಕೇಳಬಹುದು. ಎದೆನೋವು, ಮಾನಹಾನಿ, ಧನಧಾನ್ಯ ಪಶುಹಾನಿ. ಲಗ್ನಕ್ಕೆ ಉಪಚಯ ಸ್ಥಾನದಲ್ಲಿ ವೃಷಭ ಮಿಥುನ ಕರ್ಕಾಟಕ ಕನ್ಯಾರಾಶಿಗಳಲ್ಲಿದ್ದರೆ ರಾಜಪ್ರಸಾದ, ಸನ್ಮಾನ

ವಸ್ತ್ರಭೂಷಣಲಾಭ ; ಶನಿ ಕುಜ ರಾಹುಗಳು ಸೇರಿದರೆ ದಾರವ್ಯಸನ, ಮಾತಾಪುತ್ರ ಹಾನಿ, ಬಂಧುವ್ಯಸನ, ರಾಹುವಿಗೆ ರವಿಸಂಬಂಧದಿಂದ ಸರ್ಕಾರಕ್ಕೆ ದಂಡ ತೆರಬೇಕು, ಪಿತ್ತಭ್ರಮಣ, ಕಾಡಿನಲ್ಲಿ ತಿರುಗುವನು ಚಂದ್ರನಿಂದ ಮಾತೃವರ್ಗಕ್ಕೆ ಪೀಡೆ. ಮಾನಭಂಗ, ಅಪಕೀರ್ತಿ. ಕುಜನಿಂದ ಆಯುಧಗಾಯ, ಸೋದರಹಾನಿ, ಅಗ್ನಿಪೀಡೆ. ಬುಧನಿಂದ ವಿದ್ಯಾಲಾಭ, ವಸ್ತ್ರಭೂಷಣವೃದ್ಧಿ, ಸ್ನೇಹಕ್ಕೆ ವಿರೋಧ, ಗುರುವಿನಿಂದ ಕುಲಾಚಾರಕ್ಕೆ ಕೇಡು, ಪುತ್ರಪೀಡೆ, ಧನಹಾನಿ; ಶುಕ್ರನಿಂದ ಕುಟುಂಬಹಾನಿ, ಹೆಂಗಸರ ವಿವಾದ, ಪಶುಹಾನಿ, ಶನಿಯಿಂದ ದ್ರವ್ಯಹಾನಿ. ದಶಾಧಿಪತಿಗೆ ೩-೬-೧೧ ಕೇಂದ್ರತ್ರಿಕೋಣಗಳಲ್ಲಿ ಶುಭಗ್ರಹಯುಕ್ತನಾದರೆ ಧನಧಾನ್ಯಗಳು ಹೇರಳವಾಗಿ ದೊರೆಯುತ್ತದೆ, ಕುಟುಂಬಸೌಖ್ಯ, ಪ್ರಭುಪ್ರೀತಿ. ದಶಾಧಿಪತಿಗೆ ಪಾಪಸ್ಥಾನಗಳಲ್ಲಿ ಬಲಹೀನನಾದರೆ ಕಡುಕಷ್ಟಗಳು,ಬಂಧುಶೋಕ, ಮುಂಡೆಯರ ಜಗಳ,ದಾಯಾದಿ ವ್ಯಾಜ್ಯ ರಾಜ ಮೂಲಕ ಧನಹಾನಿ. ೨-೭ರಲ್ಲಿದ್ದರೆ ಅಪಮೃತ್ಯುಭಯ- ಇದರ ಪರಿಹಾರಕ್ಕೆ ಕುಮಾರಮಂತ್ರ ಜಪವನ್ನು ಮಾಡಿ ನಾಗದಾನವನ್ನು ಮಾಡುವುದರಿಂದ ಸೌಖ್ಯ.

........

## ಶನಿದಶಾ ಗುರುಭುಕ್ತಿ ೩೦ ತಿಂಗಳು ೧೨ ದಿನಕ್ಕೆಫಲ

ಶನಿದಶಾ ಗುರುಭುಕ್ತಿಯಲ್ಲಿ ಗುರುವು ೩-೧೧ ಕೇಂದ್ರ ತ್ರಿಕೋಣಗಳು ಉಚ್ಚರಾಶಿಗಳಲ್ಲಿದ್ದರೆ ಮಕ್ಕಳಿಗೆ ಅಧಿಕಾರವೃದ್ಧಿ, ಪುತ್ರೀವಿವಾಹ, ಗೃಹಲಾಭ, ಉತ್ಸವ, ರಾಜಾಧಿಕಾರ ಯಜ್ಞದೀಕ್ಷೆ, ಗುರುವಾರದಲ್ಲಿ ಪ್ರಭುಸನ್ಮಾನ, ಧನಧಾನ್ಯ ಭೂಲಾಭ, ವಾಹನಲಾಭ, ಪುಣ್ಯಕಾರ್ಯ. ಲಗ್ನಕ್ಕೆ ೬-೮-೧೨ ನೀಚರಾಶಿಗಳಲ್ಲಿದ್ದರೆ ಗುರುಪುತ್ರ ಹಾನಿ, ನೆಂಟರ ಜಯ, ಕುಲಾಚಾರಭಂಗ, ಧನಹಾನಿ, ಚಿತ್ತವೈಕಲ್ಯ, ದೇಹಬಾಧೆ, ಸ್ಥಳದಲ್ಲಿ ಫಲಹಾನಿ, ಉದ್ಯೋಗ ಚಲನೆಯಿಂದ ಆಸ್ತಿ ಕೆಡುತ್ತೆ, ಯುದ್ಧದಲ್ಲಿ ಭಯ. ಆ ಗುರುವಿನೊಡನೆ ಸೇರಿದ ಅಥವ ನೋಡಲ್ಪಡುವ ಗ್ರಹಗಳ ಫಲವನ್ನು ಬಲಾನುಸಾರವಾಗಿ ಕಲ್ಪಿಸಬೇಕು. ರವಿಯಿಂದ ದೇವರಪೂಜೆ, ತೀರ್ಥಯಾತ್ರೆ. ಚಂದ್ರನಿಂದ ಗ್ರಾಮಾಧಿಕಾರ, ವಾಹನಲಾಭ, ಜಯ. ಕುಜನಿಂದ ರತ್ನಲಾಭ, ಸೋದರಕ್ಷೇತ್ರ ವೃದ್ಧಿ. ಬುಧನಿಂದ ಗುರುಪೂಜೆ, ಶಿವಪೂಜೆ, ಮಿತ್ರಲಾಭ. ಶುಕ್ರನಿಂದ ಸ್ತ್ರೀಭೋಗ, ವಿಷಯಸೌಖ್ಯ, ವಸ್ತ್ರವಾಹನ, ಭೂಷಣಪ್ರಾಪ್ತಿ. ರಾಜಾಶ್ರಯ ಲಾಭ, ಶನಿಯಿಂದ ಸೇವಕರಿಗೆ ಸಂಬಳಕೊಡುವನು,ಪಶುಹಾನಿಯೂ ಧಾನ್ಯಹಾನಿಯೂಉಂಟಾಗುವುದು. ದಶಾಧಿಪತಿಗೆ ಶುಭಸ್ಥಾನದಲ್ಲಿ ಶುಭಫಲ, ಪಾಪಸ್ಥಾನದಲ್ಲಿ ಪಾಪಫಲ, ತನ್ನ ಉಚ್ಚಾಂಶದಲ್ಲಿ ಬಲಾಧಿಕನಾದರೆ ಮಹಾಸೌಖ್ಯವುಂಟಾಗುವದು, ನಷ್ಟರಾಜ್ಯ ಮರಳಿ ಬಂದೀತು, ವಂಶ ನಿಂತೀತು, ಪುತ್ರಾಪೌತ್ರಾಭಿವೃದ್ಧಿಯಾಗಿರುವನು. ಭುಕ್ತಿಯ ಕಡೆಯಲ್ಲಿ ರೋಗ ಪೀಡೆ, ಶುಭಗ್ರಹದೃಷ್ಟಿಯಿದ್ದರೆ ದೋಷವಿಲ್ಲ. ೨-೭ರಲ್ಲಿಯಾಗಲಿ ೨-೭ಕ್ಕೆ ಅಧಿಪತಿ

ಯಾದವನಿಂದ ಕೂಡಿಯಾಗಲಿ ಇದ್ದರೆ ಅಪಮೃತ್ಯುಭಯ. ಇದರ ಪರಿಹಾರ ತ್ರ್ಯಂಬಕಮಂತ್ರ ಜಪವನ್ನು ಮಾಡಿ ಬಂಗಾರದ ಭಾಗದಾನವನ್ನು ಮಾಡಿದರೆ ಪರಿಹಾರವಾದೀತು.

—0—

## ಬುಧದಶಾ ೧೭ ವರ್ಷಕ್ಕೆ ಫಲ

ಬುಧದಶಾ ಆದಿಭಾಗದಲ್ಲಿ ಧನಧಾನ್ಯಸಂಪತ್ತು, ಮಧ್ಯಭಾಗದಲ್ಲಿ ಪ್ರಭುಸನ್ಮಾನ ಅಂತ್ಯದಲಿ ಸ್ವಜನವಿರೋಧ, ಇವುಗಳು ಸಾಮಾನ್ಯ ಫಲಗಳು, ಬುಧನು ಸ್ಥಾನಬಲ ವುಳ್ಳವನಾದರೆ ಕೀರ್ತಿ, ರಾಜ್ಯಭೋಗಗಳು, ಸ್ಥಾನಬಲವಿಲ್ಲದಿದ್ದರೆ ಕುಟುಂಬಭಯ, ದುಃಖಗಳು. ದಿಗ್ಬಲವಿದ್ದರೆ ಮಿತ್ರಲಾಭ, ಸುಖ. ಕಾಲಬಲವಿದ್ದರೆ ದೇಹಸೌಖ್ಯ, ಪುಣ್ಯ, ನೈಸರ್ಗಿಕಬಲವಿದ್ದರೆ ಮಾತೃಗಂಡ. ಶುಭಕರ್ಮ, ವಿದ್ಯಾಲಾಭ. ವಕ್ರ ಚೇಷ್ಟಾಬಲದಿಂದ ತೀರ್ಥಸ್ನಾನ, ಕುಟುಂಬ ಧನಲಾಭ. ಕ್ರೂರದ್ರೇಕ್ಕಾಣದಲ್ಲಿದ್ದರೆ ನಾನಾಬಗೆ ಕಷ್ಟಗಳು. ಅತ್ಯುಚ್ಚದಲ್ಲಿ ಮಹಾಭಾಗ್ಯ, ಉಚ್ಚದಲ್ಲಿ ಧನವೃದ್ಧಿ, ನೀಚ ದಲ್ಲಿ ಮೂಢತ್ವ, ಅಧಿಕಾರಹಾನಿ, ಪರಸ್ಥಳ ಕಷ್ಟ. ಅತಿ ನೀಚದಲ್ಲಿ ಸ್ಥಾನಹಾನಿ, ಕುಲಹಾನಿ, ಕಷ್ಟ ಜಗಳ, ಉಚ್ಚಗ್ರಹದಿಂದ ಕೂಡಿದರೆ ಕೃಷಿ ವಾಣಿಜ್ಯ ಲಾಭ, ನೀಚಗ್ರಹದಿಂದ ಕೂಡಿದರೆ ಮನೋರೋಗ. ಉಚ್ಚಾಂಶದಲ್ಲಿ ಮನಸ್ಸಿಗೆ ಉಲ್ಲಾಸ. ಆಭರಣಲಾಭ, ನೀಚಾಂಶದಲ್ಲಿದ್ದರೆ ಹಾಸ್ಯಾಸ್ಪದ ನೀಚಜೀವನ, ಉಚ್ಚರಾಶಿಯಲ್ಲಿ ನೀಚಾಂಶದೊಳಗೆ ಸುಖಲಾಭವಾಗಿ ನಂತರ ಭಂಗ. ನೀಚರಾಶಿಯಲ್ಲಿ ಉಚ್ಚಾಂಶ ದೊಳಗಿದ್ದರೆ ಅಶುಭವಾಗಿ ನಂತರ ಸುಭವಾಗುತ್ತೆ. ಮೂಲತ್ರಿಕೋಣದಲ್ಲಿದ್ದರೆ ಅಲಂಕಾರಲಾಭ, ಭೂಲಾಭ. ಕುಟುಂಬವೃದ್ಧಿ, ಕೃಷಿಲಾಭ ಸ್ವಕ್ಷೇತ್ರದಲ್ಲಿ ಇದ್ದರೆ ತನ್ನ ಮನೆಯಲ್ಲಿ ಸತ್ಕಾರ ಮಾಡಿಕೊಂಡು ಸುಖಪಡುವನು. ಅಮಿತ್ರಕ್ಷೇತ್ರದಲ್ಲಿದ್ದರೆ ಹಲವು ಸೌಖ್ಯಗಳು. ಮಿತ್ರರಾಶಿಯಲ್ಲಿದ್ದರೆ ಧನಲಾಭ. ಪಶುವೃದ್ಧಿ, ಸಂಪತ್ತು. ಸ್ವಕ್ಷೇತ್ರದಲ್ಲಿದ್ದರೆ ಮಿಶ್ರಫಲ. ಶತ್ರುರಾಶಿಯಲ್ಲಿ ತನ್ನವರೊಡನೆ ವಿರೋಧ, ದೇಹಾ ಯಾಸ. ಅತಿಶತ್ರುರಾಶಿಯಲ್ಲಿ ಚಿಂತೆ, ಕಷ್ಟಗಳು, ರಾಜಭಯ. ಶುಭಗ್ರಹದಿಂದ ಕೂಡಿದರೆ ಮನೆಯಲ್ಲಿ ಉತ್ಸವಗಳಾಗುವುದು, ಪಾಪಗ್ರಹದಿಂದ ಕೂಡಿದರೆ ವಾಹನ ಭಂಗ, ಶುಭಗ್ರಹದಿಂದ ನೋಡಿದರೆ ವಿದ್ಯಾಕೀರ್ತಿ, ಪಾಪಗ್ರಹದಿಂದ ನೋಡಿದರೆ ಕಲಹ, ಸ್ವತ್ತುಗಳ ನಾಶ. ಕೇಂದ್ರದಲ್ಲಿದ್ದರೆ ನೆಂಟರಿಗೆ ವೃದ್ಧಿ, ಉದಾರತ್ವ. ೬-೮-೧೨ ರಲ್ಲಿದ್ದರೆ ಧನಹಾನಿ, ಸ್ಥಾನಭ್ರಂಶವಾಗುವದು.

—✳—

## ಬುಧದಶಾ ಬುಧಭುಕ್ತಿ ೨೮ ತಿಂಗಳು ೨೭ ದಿನಕ್ಕೆ ಫಲ

ಬುಧದಶಾ ಬುಧಭುಕ್ತಿಯಲ್ಲಿ ಬುಧನು ಜನ್ಮಕಾಲದಲ್ಲಿ ಲಗ್ನಕ್ಕೆ ಕೇಂದ್ರತ್ರಿಕೋಣ ಗಳಲ್ಲಿಯೂ೩-೧೧ರಲ್ಲಿಯೂ ಉಚ್ಚರಾಶಿಯಲ್ಲಿಯೂ ಇದ್ದರೆ ನೆಂಟರ ಮದುವೆ,ಕ್ರಿಯ

ಮೂಲಕವಾಗಿ ಧನಲಾಭ, ದ್ವೀಪಾಂತರ ವಸ್ತುಲಾಭ, ಅಧಿಕಾರವೃದ್ಧಿ, ಗೃಹಾದಿ ಕಾರ್ಯ, ವಿದ್ಯಾವೃದ್ಧಿ, ನೆಂಟರ ಆಗಮನ, ಸಂತಾನಲಾಭ, ಸ್ತ್ರೀಭೋಗ ಮುಂತಾದ ಶುಭಫಲಗಳು ಆಗುವವು, ೬-೮-೧೨ ನೀಚರಾಶಿ, ಇವುಗಳಲ್ಲಿಯೂ ಹಸ್ತದಲ್ಲಿಯೂ ತಲೆಯಲ್ಲಿಯೂ ಪಾಪಗ್ರಹ ಸಂಬಂಧಿಯಾಗಿದ್ದರೆ ಅಂಥಾ ಬುಧನ ಭುಕ್ತಿಯಲ್ಲಿ ನೆಂಟರ ವಿರೋಧ, ಕುಟುಂಬ ಪೀಡೆ, ಕೆಲಸ ಕೇಡು, ಅಕಾರ್ಯ, ರಾಜವಿರೋಧ, ಧನಹಾನಿ, ಅಸೌಖ್ಯ, ಪರಸ್ಥಳವಾಸ ಇತ್ಯಾದಿ ಅಶುಭಫಲಗಳಾಗುವವು. ಬುಧನು ರವಿಯಿಂದ ಕೂಡಿದರೂ ನೋಡಿದರೆ ಬಲಿಷ್ಠನಾದರೆ ಅಧಿಕಾರಲಾಭ, ಪಿತೃವರ್ಗಕ್ಕೆ ಶುಭ, ಪ್ರಭುವಿಶ್ವಾಸ; ಚಂದ್ರನಿಂದ ಸೌಖ್ಯ ; ಕುಜನಿಂದ ಕಲಹ; ಬುಧನಿಂದ ಸಂಬಂಧಿಸಿದ ಗ್ರಹವು ಗುರುವಾದರೆ ಸಂತಾನ; ಶುಕ್ರವಾದರೆ ವಾಹನಲಾಭ ; ಶನಿ ಯಾದರೆ ಸರಕಾರದ ಶಿಕ್ಷೆ; ಬುಧನು ೨-೭ರಲ್ಲಿದ್ದು, ಮಾರಕನಾದರೆ ಅಪಮೃತ್ಯು ಗಂಡ; ಇದರ ಪರಿಹಾರಕ್ಕಾಗಿ ವಿಷ್ಣು ಸಹಸ್ರನಾಮಜಪವನ್ನು ಮಾಡಿ ಲಕ್ಷ್ಮೀನಾರಾ ಯಣ ಪ್ರತಿಮಾದಾನವನ್ನು ಮಾಡಿದರೆ ಶುಭವುಂಟಾಗುವುದು.

## ಬುಧದಶಾ ಕೇತುಭುಕ್ತಿ ೧೧ ತಿಂಗಳು ೨೭ ದಿನಕ್ಕೆ ಫಲ

ಬುಧದಶಾ ಕೇತುಭುಕ್ತಿಯಲ್ಲಿ ಕೇತುವು ಜನ್ಮಕಾಲದಲ್ಲಿ ಕೇಂದ್ರತ್ರಿಕೋಣ ಗಳಲ್ಲಿಯೂ ಉಪಚಯದ ರಾಶಿಯಲ್ಲಿಯೂ ಉಚ್ಚರಾಶಿಯಲ್ಲಾದರೂ ಇದ್ದರೆ ಜಯ ಭಾಗ್ಯಲಾಭ,ಸೊಂದರೀವಂಶವೃದ್ಧಿ, ಪಡುವಲಿಗೆ ಪ್ರಯಾಣ, ಪ್ರಭುದರುಶನ. ಕೃಷಿ ಕಾರ್ಯಲಾಭ, ದೇವತಾದರುಶನ. ಸ್ತ್ರೀಮೂಲಕ ಧನಲಾಭವಾಗುತ್ತೆ ; ೬-೮-೧೨ ನೀಚರಾಶಿಯಲ್ಲಿ ನೀಚಾಂಶೆಯಲ್ಲಿ ಪಾಪಗ್ರಹಯುಕ್ತನಾದ ಕೇತುವಿನಿಂದ ಪಶುಗಂಡ : ನೀಚರಿಂದ ಧನಹಾನಿ, ದಾಯಾದಿ ಜಗಳ, ಸ್ವತ್ತುಗಳಿಗೆ ನಷ್ಟ, ಅಧಿಕಾರಚಲನ, ಮಾನಭಂಗವಾಗುತ್ತೆ, ರವಿಸಂಬಂಧವಿದ್ದರೆ ಪಿತ್ತದಿಂದ ತಲೆನೋವು, ಅಗ್ನಿಭಯ ; ಚಂದ್ರನಿಂದ ತಾಯಿಯ ಕಡೆಯವರಿಗೆ ಕೇಡು, ಅಸೌಖ್ಯ ; ಕುಜನಿಂದ ಸೋದರ ಭಯ, ಕಳ್ಳರಕಾಟ, ಆಯುಧ ಭಯ, ವಿಷಗಂಡ : ಬುಧನಿಂದ ಶುಭಕಾರ್ಯ : ಗುರುವಿನಿಂದ ಕೇಡು ; ಶುಕ್ರನಿಂದ ಕುಟುಂಬ ಕಲಹ, ನಷ್ಟ; ಶನಿಯಿಂದ ಕೃಷಿಹಾನಿ; ಕೇತುವು ಬುಧನಿಗೆ ಶುಭಸ್ಥಾನದಲ್ಲಿದ್ದರೆ ಧನವೃದ್ಧಿ, ಶುಭಫಲಗಳು : ಅಶುಭಸ್ಥಾನ ದಲ್ಲಿದ್ದರೆ ಕಷ್ಟ ಫಲಗಳಾಗುವುದು ; ಮಾರಕಸ್ಥಾನದಲ್ಲಿದ್ದರೆ ಅಪಮೃತ್ಯುಭಯ, ಎಮ್ಮೆ ಯನ್ನು ದಾನಕೊಟ್ಟರೆ ಕ್ಷೇಮವುಂಟಾದೀತು.

## ಬುಧದಶಾ ಶುಕ್ರಭುಕ್ತಿ ೩೪ ತಿಂಗಳಿಗೆ ಫಲ

ಬುಧದಶಾ ಶುಕ್ರಭುಕ್ತಿಯಲ್ಲಿ ಶುಕ್ರನು ಶುಭಕ್ಷೇತ್ರಗಳಲ್ಲಿ ಬಲಿಷ್ಠನಾಗಿದ್ದರೆ ಮಹಾ ಭಾಗ್ಯಯೋಗ, ಐಶ್ವರ್ಯಲಾಭ. ಭೋಗವೃದ್ಧಿ, ಸುಖಜೀವನ. ಲಗ್ನಕ್ಕೆ ಪಾಪಸ್ಥಾನಗಳಲ್ಲಿದ್ದರೆ ಕಾರ್ಯಹಾನಿ, ಅಸೌಖ್ಯ, ಸ್ತ್ರೀದುಃಖ, ನಷ್ಟಗಳಾಗುವವು,

ಶುಕ್ರನಿಗೆ ಂಬಂಧಿಸಿದ ರವಿಯಿಂದ ಕೆಲಸಕೇಡು, ಪ್ರಭುವಿರೋಧ, ಸ್ಥಳ, ತಪ್ಪುವಿಕೆ ಚಂದ್ರನಿಂದ ಮನೋದುಃಖ ; ಕುಜನಿಂವ ಸ್ತ್ರೀಸೋದರ ಕಲಹ ; ಬುಧನಿಂದ ಲಿಪಿ ಗಣಿತಕಾರ್ಯ ; ಗುರುವಿನಿಂದ ಕಾರ್ಯಾನುಕೂಲ, ಸಂತಾನಸೌಖ್ಯ, ಶನಿಯಿಂದ ನೀಚರ ಜಗಳ, ಬೇಸಾಯ ಕೇಡು, ದಶಾಧಿಪತಿಗೆ ಶುಭಸ್ಥಾನದಲ್ಲಿದ್ದರೆ ಉತ್ತಮ ಫಲಗಳು, ಅಶುಭಸ್ಥಾನದಲ್ಲಿದ್ದರೆ ಅಧಮ ಫಲಗಳು ಮತ್ತು ಕಷ್ಟಗಳು ಆಗುತ್ತೆ ; ಸುಕ್ರನು ಮಾರಕಲಕ್ಷಣವುಳ್ಳವನಾದರೆ ಅಪಮೃತ್ಯು, ಇತರ ಪರಿಹಾರಕ್ಕಾಗಿ ಬಿಳೀ ಆಕಳನ್ನು ದಾನಕೊಟ್ಟು ದುರ್ಗಾಲಕ್ಷ್ಮೀ ಜಪವನ್ನು ಮಾಡಿಸಿದರೆ ಕ್ಷೇಮವುಂಟು.

## ಬುಧದಶಾ ರವಿಭುಕ್ತಿ ೧೦ ತಿಂಗಳು ೬ ದಿನಕ್ಕೆ ಫಲ

ಬುಧದಶಾ-ರವಿಭುಕ್ತಿಯಲ್ಲಿ ರವಿಯು ಲಗ್ನಕ್ಕೆ ಕೇಂದ್ರ ತ್ರಿಕೋಣಾದಿ ಶುಭ ಸ್ಥಾನಗಳಲ್ಲಿ ಬಲವಂತನಾಗಿದ್ದರೆ ಪ್ರಭುಗಳ ಆಶ್ರಯ ಸಿಕ್ಕಿ ಮೂಡಲಿಗೆ ಪ್ರಯಾಣ, ತಂದೆಯು ಕಡೆಯುವರಿಗೆ ಜಯ, ದೇವಕಾರ್ಯ, ಹಿರಿಯರ ದರುಶನ, ಜಯ; ಕುಜನಿಂದ ಕೂಡಿದರೆ ಭೂಲಾಭ; ಲಗ್ನಾಧಿಪತಿ ಸಂಬಂಧವಿದ್ದರೆ ಆದಿಯಲ್ಲಿ ಧನಲಾಭ, ಬಳಿಕ ಕಷ್ಟ, ಶನಿ ಕುಜ ರಾಹುಗಳಿಂದ ಕೂಡಿದರೆ ವ್ರಣ ಬಾಧೆ. ೬-೮-೧೨ ನೀಚ ಇತ್ಯಾದಿಗಳಲ್ಲಿ ಹಗೆಗಳ ಪೀಡೆ, ಸೋಲುವಿಕೆ, ಧನ ವ್ಯಯ. ಭಯ, ಪಶುಹಾನಿ, ಕುಟುಂಬ ಕಲಹ. ಚಂದ್ರ ನೋಡಿದರೆ ಆಭರಣಲಾಭ. ಕುಜನಿಂದ ರತ್ನಲಾಭ. ಬುಧನಿಂದ ಕೃಷಿವಾಣಿಜ್ಯವೃದ್ಧಿ, ವಿನೋದ ಕಾಲಕ್ಷೇಪ. ಗುರುವಿನಿಂದ ಕುಟುಂಬ ಸೌಖ್ಯ ಶುಕ್ರನಿಂದ ಭಾಗ್ಯವೃದ್ಧಿ, ಶನಿಯಿಂದ ಇದ್ದದ್ದನ್ನು ಕಳೆದುಕೊಳ್ಳುವಿಕೆ. ರವಿಯು ಬುಧನಿಗೆ ಕೇಂದ್ರತ್ರಿಕೋಣಾದಿ ಶುಭಸ್ಥಾನಗಳಲ್ಲಿದ್ದರೆ ಉದ್ಯೋಗ ಸಿಕ್ಕಿ ಸಂತೋಷಕಾಲಕ್ಷೇಪ. ಕುಟುಂಬಸೌಖ್ಯ, ಷಷ್ಟಾಷ್ಟ ಮರು ಪಾಪಸ್ಥಾನಗಳಲ್ಲಿ ಇದ್ದರೆ ಅರಿಷ್ಟಗಳು, ಮಾರಕಸ್ಥಾನಗಳಲ್ಲಿದ್ದರೆ ಅಪಮೃತ್ಯು, ಇದರ ಪರಿಹಾರಕ್ಕೆ ಸೂರ್ಯ ಪ್ರಾರ್ಥನೆ ಜಪ ಮಾಡಿಸಲು ಸೌಖ್ಯವುಂಟಾಗುವುದು.

## ಬುಧದಶಾ ಚಂದ್ರಭುಕ್ತಿ ತಿಂಗಳು ೧೭ ಕ್ಕೆ ಫಲ

ಬುಧದಶಾ ಚಂದ್ರಭುಕ್ತಿಯಲ್ಲಿಚಂದ್ರನು ಲಗ್ನಕ್ಕೆ೪-೭-೧೦-೯-೩-೧೧ರಲ್ಲಿಯೂ ವೃಷಭದಲ್ಲಿಯೂ ಕರ್ಕಾಟಕದಲ್ಲಿಯೂ ಬಲಿಷ್ಠನಾದರೂ ಗುರು ಸಂಬಂಧವಾದರೂ ಗ್ರಾಮಾಧಿಕಾರ, ಕುದುರೇ ಸವಾರಿ, ಧಣಿಗಳ ಮೆಚ್ಚಿಕೆ, ಆಭರಣ ಲಾಭ, ಪ್ರಸ್ತುತಪ್ರಯೋಜನ, ಧನಧಾನ್ಯ ಲಾಭ, ಲಗ್ನಕ್ಕೆ ೬-೮-೧೨ ವೃಶ್ಚಿಕಗಳಲ್ಲಿ ಪಾಪ ಗ್ರಹ ಸಂಬಂಧವಾಗಿದ್ದರೆ ಅಪವಾದ. ವ್ಯಾಜ್ಯ, ಸಾಲ, ಹಾನಿ, ತಾಯಿಕಡೆ ಜಗಳ, ಕೆಲಸ ಕೇಡು, ಯಜಮಾನನಿಗೆ ಸಿಟ್ಟು, ರವಿಸಂಬಂಧವಾದರೆ ಪಯಣದಲ್ಲಿ ಕಷ್ಟ. ಕುಜನಿಂದ ಮದುವೆ ಸಂತೋಷ, ಸೋದರ ವೃದ್ಧಿ.ಬುಧನಿಂದ ವಿದ್ಯಾವ್ಯಾಪಾರಗಳು. ಗುರುವಿನಿಂದ ಗುರುದೇವ ಭಕ್ತಿ, ಶುಕ್ರನಿಂದ ಪರಸ್ತ್ರೀವಿಷಯ. ಶನಿಯಿಂದ ಹಾನಿ.

ದಶಾಧಿಪತಿಗೆ ಶುಭಸ್ಥಾನದಲ್ಲಿದ್ದರೆ ಸೌಖ್ಯ, ಸಾಧನ, ಅಶುಭಸ್ಥಾನದಲ್ಲಿದ್ದರೆ ಕಷ್ಟ ಸಾಧನವಾಗುತ್ತೆ, ಮಾರಕಸ್ಥಾನದಲ್ಲಿದ್ದರೆ ಅಪಮೃತ್ಯುಭಯ ; ಇದರ ಪರಿಹಾರಕ್ಕೆ ದುರ್ಗಾಜಪ ಮಾಡಿಸಿ ಬೆಳ್ಳಿಯ ದಾನವನ್ನು ಮಾಡಬೇಕು.

## ಬುಧದಶಾ ಕುಜಭುಕ್ತಿ ೧೧ ತಿಂಗಳು ೨೭ ದಿನಕ್ಕೆ ಫಲ

ಬುಧದಶಾ ಕುಜಭುಕ್ತಿಯಲ್ಲಿ ಬುಧನು ಜನ್ಮಕಾಲದಲ್ಲಿ ಲಗ್ನಕ್ಕೆ ಅನುಕೂಲ ಸ್ಥಾನದಲ್ಲಿದ್ದರೆ ಶುಭಫಲ. ಲಗ್ನಾಧಿಪತಿಯಿಂದ ಕೂಡಿದರೆ ಕೆಂಪುವಸ್ತು ಸಿಗುತ್ತೆ, ಗ್ರಾಮಭೂಮಿ ದೊರೆಯುತ್ತೆ : ಪ್ರತಿಕೂಲಸ್ಥಾನಗಳಲ್ಲಿ ಕ್ರೂರನಾದರೆ ಕಷ್ಟನಿಷ್ಠೂರ, ಗಳಾಗುವವು. ಬಂಧುಮರಣ, ದುಃಖ, ಜ್ಞಾನಪೈತ್ಯ, ಸಾಲದ ಭಾಧೆ, ವೈರಿಗಳ ಕಾಟ ; ರವಿಸಂಬಂಧವಿದ್ದರೆ ಪರಾಭವ ; ಚಂದ್ರನಿಂದ ವ್ಯಪ್ಯಾನ್ನ ; ಬುಧನಿಂದ ವರ್ತಕತನ ; ಗುರುವಿನಿಂದ ಸರಕಾರದ ಪೀಡೆ, ಆಕಳು ಮರುಳವು. ಶುಕ್ರನಿಂದ ಬಸುರು ಇಳಿಯುವಿಕೆ, ರಕ್ತರೋಗ, ಶನಿಯಿಂದ ಕೆಲಸ ಕೆಡುತ್ತೆ. ದಶಾಧಿಪತಿಗೆ ೪-೭-೧೦-೫-೯-೧೧ರಲ್ಲಿಯೂ ಉಚ್ಚದಲ್ಲಿಯೂ ಶುಭಗ್ರಹದಿಂದ ಶುಭದೃಷ್ಟಿ ಕೂಡಿ ಯಿದ್ದು ಬಲವಂತನಾದರೆ ನಿತ್ಯಧನಲಾಭ, ಪ್ರಭುಪ್ರೀತಿ, ಜನಮೈತ್ರಿ, ಕುಟುಂಬ ವೃದ್ಧಿ, ಕಲ್ಯಾಣಕಾರ್ಯ, ಅಧಿಕಾರಲಾಭ, ಶುಭಕಾರ್ಯ, ದಶಾಧಿಪತಿಗೆ ೬-೮-೧೨ ನೀಚ ರಾಶಿ ಮುಂತಾದ್ದರಲ್ಲಿ ಪಾಪಗ್ರಹದಿಂದ ಕೂಡಿ ಪಾಪದೃಷ್ಟಿಯಿಂದ ಬಲಹೀನನಾದರೆ ನೆಂಟರವಿರೋಧ, ಅಗ್ನಿಪೀಡೆ, ಮೂಲವ್ಯಾಧಿ, ವಿಷಜಂತುಭಯ. ಕುಟುಂಬಕ್ಕೆ ಕಷ್ಟ, ಜನವಿರೋಧ, ಆಪತ್ತುಗಳು. ಮಾರಕಸ್ಥಾನದಲ್ಲಿದ್ದರೆ ಅಪಮೃತ್ಯು ಭಯ ಇದರ ಪರಿಹಾರಕ್ಕೆ ಮೃತ್ಯುಂಜಯ ಜಪವನ್ನು ಸ್ಕಂದಪೂಜೆಯನ್ನೂ ಮಾಡಿ ವೃಷಭ ದಾನವನ್ನು ಮಾಡಬೇಕು.

## ಬುಧದಶಾ ರಾಹುಭುಕ್ತಿ ೩೦ ತಿಂಗಳು ೧೮ ದಿನಕ್ಕೆ ಫಲ

ಬುಧದಶಾ ರಾಹುಭುಕ್ತಿಯಲ್ಲಿ ರಾಹು ಶುಭಸ್ಥಾನದಲ್ಲಿದ್ದರೆ ಶುಭಫಲಗಳು. ನೀಚಸ್ಥಾನದಲ್ಲಿದ್ದರೆ ಹೀನಫಲಗಳು, ಅಶುಭಸ್ಥಾನಲ್ಲಿದ್ದರೆ ಕಷ್ಟಫಲಗಳು. ಕರ್ಕಾಟಕ ಸಿಂಹ, ಕುಂಭಗಳಲ್ಲಿದ್ದರೆ ವಿರೋಧ, ಜಗಳದಲ್ಲಿ ಸೋಲುವಿಕೆ, ರವಿಸಂಬಂಧ ವಿದ್ದರೆ ತಿರುಗಾಟ, ಸ್ಥಳ ತಪ್ಪುತ್ತೆ. ಕುಜಸಂಬಂಧದಿಂದ ಕ್ರೂರತ್ವ, ಚಂದ್ರನಿಂದ ಸ್ತ್ರೀಕಲಹ, ಬುಧನಿಂದ ಸಾಲ, ಗುರುವಿನಿಂದ ಜಾಡ್ಯ, ಧನಹಾನಿ, ಶುಕ್ರನಿಂದ ಸಂತೋಷ, ಶನಿಯಿಂದ ಆಲಸ್ಯ, ದಶಾಧಿಪತಿಗೆ ಕೇಂದ್ರ ಶುಭಸ್ಥಾನಗಳಲ್ಲಿದ್ದರೆ ಪ್ರಿಯ ವಸ್ತುಲಾಭ. ೬ನೇ ಮನೆಯಲ್ಲಿದ್ದರೆ ಸೌಖ್ಯ. ೬-೮ ಮೊದಲಾದ ದುಷ್ಟಸ್ಥಾನಗಳಲ್ಲಿ ದ್ದರೆ ಬುದ್ಧಿವೈಕಲ್ಯ, ಮುಂಡೆಯರ ಜಗಳ, ಅಕಾಲಭೋಜನ, ೨-೭ರಲ್ಲಿದ್ದರೆ ಅಪ ಮೃತ್ಯುಭಯ. ಇದರ ಪರಿಹಾರಕ್ಕೆ ರುದ್ರಪಾರಾಯಣ ಮಾಡಿ ಛಾಗದಾನ ಮಾಡಿದರೆ ಕ್ಷೇಮವಾಗುತ್ತೆ.

## ಬುಧದಶಾ ಗುರುಭುಕ್ತಿ ೨೭ ತಿಂಗಳು ೬ ದಿನಕ್ಕೆ ಫಲ

ಬುಧದಶಾ ಗುರುಭುಕ್ತಿಯಲ್ಲಿ ಗುರುವು ಜನ್ಮಕಾಲದಲ್ಲಿ ಸ್ಥಾನಾದಿ ಶುಭ ಬಲವುಳ್ಳವನಾದರೆ ಬೇಕಾದ ಪದಾರ್ಥಗಳು ಸಿಕ್ಕುವುದು: ಧರ್ಮಕಾರ್ಯಗಳನ್ನು ಮಾಡುವನು. ಕುಟುಂಬಜನ ಸೌಖ್ಯ, ವಾಹನಲಾಭ, ಜಯಕೀರ್ತಿಗಳುಂಟು. ರವಿಸಂಬಂಧವಿದ್ದರೆ ಬೇಸಾಯದಿಂದ ಲಾಭ, ಉದ್ಯೋಗ ಸಿಕ್ಕುತ್ತೆ, ಚಂದ್ರ ಸಂಬಂಧದಿಂದ ವಸ್ತ್ರಲಾಭ, ಕುಜನಿಂದ ಜಯ, ಲಾಭ. ಬುಧನಿಂದ ವಿದ್ಯಾ ಗೌರವಲಾಭ. ಶುಕ್ರನಿಂದ ಸ್ತ್ರೀಸೌಖ್ಯ, ಭೋಗಲಾಭ, ಶನಿಯಿಂದ ಗಂಟಲಿಗೆ ವ್ಯಾಧಿ, ಹಿರಿಯರ ವಿರೋಧ, ದಶಾಧಿಪತಿಗೆ ಶುಭಸ್ಥಾನದಲ್ಲಿ ಉದ್ಯೋಗ, ಕೃಷಿಲಾಭ, ಆ ವಾರದಲ್ಲಿ ಪ್ರಭುದರುಶನ, ಪಾಪಸ್ಥಾನದಲ್ಲಿದ್ದರೆ ಹಿರಿಯರ ವಿರೋಧ, ರೋಗ, ಬುದ್ಧಿಕೇಡು, ಸ್ಥಳ ತಪ್ಪುವಿಕೆ, ಪಶುಗಂಡ, ಮಾರಕಸ್ಥಾನದಲ್ಲಿದ್ದರೆ ಮೃತ್ಯುಭಯ. ಇದಕ್ಕೆ ಮೃತ್ಯುಂಜಯ ಜಪವನ್ನು ಮಾಡಿ ಸುವರ್ಣದಾನವನ್ನು ಮಾಡಿದರೆ ಪರಿಹಾರವಾಗುವುದು.

## ಬುಧದಶಾ ಶನಿಭುಕ್ತಿ ೩೨ ತಿಂಗಳು ೯ ದಿನಕ್ಕೆ ಫಲ

ಬುಧದಶಾ ಶನಿಭುಕ್ತಿಯಲ್ಲಿ ಜನನಕಾಲಕ್ಕೆ ಶನಿಯು ಲಗ್ನಕ್ಕೆ ೧-೪-೧೦-೭-೫-೯-೩-೧೧ ಉಚ್ಚರಾಶಿಗಳಲ್ಲಿ ಇದ್ದರೆ ಪಡುವಲಿಗೆ ಪ್ರಯಾಣ, ಪ್ರಭುದರುಶನ, ತಾಯಿ ನೆಂಟರಿಗೆ ವೃದ್ಧಿ, ಸೇವಕರನ್ನು ಇಟ್ಟುಕೊಳ್ಳುವನು, ದೊಡ್ಡವರ ಆಶ್ರಯ ಸಿಕ್ಕುತ್ತೆ, ಶೂದ್ರ ಮೂಲಕ ಧನಲಾಭ. ಶನಿಯು ಲಗ್ನಕ್ಕೆ ೬-೮-೧೨ರಲ್ಲಿಯೂ ನೀಚದಲ್ಲಿಯೂ ಇದ್ದರೆ ಸರಿಯಾದ ಸ್ನೇಹಿತರಿಗೆ ಹಾನಿ, ಸ್ಥಳ ತಪ್ಪುತ್ತೆ, ನೆಂಟರ ಜಗಳ, ಅಧಿಕಾರ ಭಂಗ, ದೇಶಾಂತರವಾಸ, ರವಿಸಂಬಂಧವಿದ್ದರೆ ತಲೆಗೂ ಕಣ್ಣಿಗೂ ರೋಗ, ಪಿತೃಗಂಡ ಚಂದ್ರನಿಂದ ಮಾತೃವರ್ಗಹಾನಿ. ಹಿಡಿದ ಕೆಲಸ ಕೆಡುತ್ತೆ. ಕುಜನಿಂದ ಉಷ್ಣರೋಗ ಆಯುಧಗಂಡ. ಬುಧನಿಂದ ವಿದ್ಯಾಲಾಭ, ಗುರುನಿಂದ ಸಂತಾನಪೀಡೆ, ಬುದ್ಧಿ ಚಾಂಚಲ್ಯ. ಶುಕ್ರನಿಂದ ಭೋಗಭಾಗ್ಯ. ದಶಾಧಿಪತಿಗೆ ಶುಭಸ್ಥಾನದಲ್ಲಿದ್ದರೆ ಆಶ್ಚರ್ಯಕರವಾದ ಲಾಭ, ಪಾಪಸ್ಥಾನದಲ್ಲಿದ್ದರೆ ಮೈಗೆ ಕಷ್ಟ. ಮಾರಕಸ್ಥಾನದಲ್ಲಿದ್ದರೆ ಅಪಮೃತ್ಯು ಭಯ. ಇದರ ಪರಿಹಾರಕ್ಕೆ ಎಮ್ಮೆಯನ್ನು ದಾನಮಾಡುವುದರಿಂದ ಕ್ಷೇಮ

## ಕೇತುದಶಾ ೭ ವರ್ಷಕ್ಕೆ ಫಲ

ಕೇತುದಶಾದಲ್ಲಿ ಸಾಮಾನ್ಯಫಲಗಳು ಯಾವುವೆಂದರೆ—ದುಃಖ, ಜನವಿರೋಧ, ಕಷ್ಟನಷ್ಟಗಳು, ದೇಶಭ್ರಮಣ, ಪ್ರಭುವಿರೋಧ, ಹೀಗಾದರೂ ದಶಾರಂಭದಲ್ಲಿ ಸುಖ ಮಧ್ಯದಲ್ಲಿ ಭಯ, ಅಂತ್ಯದಲ್ಲಿ ಬಹಳ ಕಷ್ಟ ಸಂಭವಿಸುತ್ತೆ. ಕೇತುವಿನ ಒಡನೆ ೧-೯-೧೦ನೆ ರಾಶಿಗಳ ಅಧಿಪತಿಗಳು ಕೂಡಿದ್ದರೆ ಭಾಗ್ಯಲಾಭ, ಅಸ್ತಗ್ರಹವಕ್ರಗ್ರಹಕೂಡಿದ್ದರೆ ರಾಜಶಿಕ್ಷೆ, ಗ್ರಹಣಕಾಲವಾದರೆ ಮೃತ್ಯು, ಅತ್ಯುಚ್ಚದಲ್ಲಿದ್ದರೆ ಮಹಾಭಾಗ್ಯ ಉಚ್ಚದಲ್ಲಿದ್ದರೆ ಸಾಧಾರಣವಾದ ಸಂಪತ್ತು, ಶುಭಗ್ರಹದಿಂದ ಕೂಡಿದ್ದರೆ ಸ್ಥಿರಲಾಭ, ಕೀರ್ತಿ.

ಪಾಪಗ್ರಹದಿಂದ ಕೂಡಿದರೆ ಸಪ್ತಾಪವಾದಗಳು, ಶುಭಗ್ರಹ ನೋಡಿದರೆ ವೃದ್ಧಿಲಾಭ, ಪಾಪಗ್ರಹ ನೋಡಿದರೆ ರೋಗ, ಪ್ರಯಾಣ-ದುಃಖಗಳು ಉಂಟಾಗುವವು.

## ಕೇತುದಶಾ ಕೇತುಭುಕ್ತಿ ೪ ತಿಂಗಳು ೨೭ ದಿನಕ್ಕೆ ಫಲ

ಕೇತುದಶಾ ಕೇತುಭುಕ್ತಿಯಲ್ಲಿ ಕೇಂದ್ರಗಳು ತ್ರಿಕೋಣಗಳು ಉಪಚಯಗಳು, ಉಚ್ಚ ಸ್ವಕ್ಷೇತ್ರ ಶುಭಾಂಶಗಳು ಇವೆಲ್ಲ ಸ್ಥಾನಬಲಗಳು. ೬-೮-೧೨ ನೀಚಶತ್ರುಕ್ಷೇತ್ರ ಪಾಪದೃಷ್ಟಿ, ಪಾಪಸಂಬಂಧ, ಅಸ್ತಾ ಇವೆಲ್ಲವೂ ದುರ್ಬಲಗಳು. ಕೇತುವಿಗೆ ಸ್ಥಾನಬಲ ವಿದ್ದು ಶುಭಾಂಶದೊಳಗೆ ಇದ್ದರೆ ಅಧಿಕಾರಲಾಭ, ಕಳ್ಳತನದಿಂದ ಧನಪ್ರಾಪ್ತಿ, ಕುಟುಂಬ ಮಿತ್ರಸೌಖ್ಯ, ಜಗಳದಲ್ಲಿ ಜಯ, ಮನೆಯಲ್ಲಿ ವೈಭವ, ನೀಚಾಂಶದಲ್ಲಿ ಜ್ಞಾತಿ, ಮುಂಡೆ ಜಗಳ, ಹೆಂಡತಿಗೆ ಪೀಡೆ, ತನಗೆ ಪರಸ್ಥಳವಾಸ. ವಾಹನಗಂಡ; ಆ ಕೇತು ವಿಗೆ ರವಿ ಸಂಬಂಧದಿಂದ ಅಧಿಕಾರಭಂಗ, ತಲೆನೋವು ; ಚಂದ್ರನಿಂದ ವಾಹನಹಾನಿ ಮನಸ್ಸಿ ಚಿಂತೆ ; ಕುಜನಿಂದ ಶಸ್ತ್ರಾಗ್ನಿಭಯ, ಉದ್ಯೋಗಕ್ಕೆ ಹಾನಿ; ಬುಧನಿಂದ ಅಸೌಖ್ಯ. ಗುರುವಿನಿಂದ ಧನಹಾನಿ, ಬುದ್ಧಿದೋಷ; ಶುಕ್ರನಿಂದ ಕಳತ್ರಪೀಡೆ, ಶನಿ ಯಿಂದ ಸೇವಕರ ಕಲಹ, ರಾಜದಂಡನೆ. ಮಾರಕಸ್ಥಾನದಲ್ಲಿ ಅಪಮೃತ್ಯು. ಇವಕ್ಕೆ ಮೃತ್ಯುಂಜಯ ಜಪಮಾಡಿ ಉಮಾಮಹೇಶ್ವರ ದಾನ ಮಾಡಲು ಪರಿಹಾರ.

## ಕೇತುದಶಾ ಶುಕ್ರಭುಕ್ತಿ ೧೪ ತಿಂಗಳಿಗೆ ಫಲ

ಕೇತುದಶಾ ಶುಕ್ರಭುಕ್ತಿಯಲ್ಲಿ ಶುಕ್ರನಿಗೆ ಜನ್ಮಕಾಲದಲ್ಲಿ ದಶಾಧಿಪತಿ ಸಂಬಂಧವು ಸ್ಥಾನಬಲವು ಇದ್ದರೆ ಕುಟುಂಬವೃದ್ಧಿ, ವಾಹನಯೋಗ. ಉತ್ಸವ, ವೇಶ್ಯಾಸಂಭೋಗ, ಪಶುವೃದ್ಧಿ, ಜಯ, ಆರೋಗ್ಯ, ಸಂಪತ್ತು, ಭಾಗ್ಯ; ಸ್ಥಾನ ಬಲಹೀನನಾಗಿ ಪಾಪ ಸಂಬಂಧವಿದ್ದರೆ ರಾಜದ್ವೇಷ, ಧನಧಾನ್ಯ ಪಶುಹಾನಿ, ಚಂಚಲಚಿತ್ತ, ಗೃಹಚ್ಛಿದ್ರ, ವಿಯೋಗ, ಕೆಲಸ ಕೇಡು; ರವಿಸಂಬಂಧದಿಂದ ಮಾಡಿದ ಕೆಲಸ ಕೆಡುತ್ತೆ ; ಚಂದ್ರದೃಷ್ಟಿ ಯಿದ್ದರೆ ವಸ್ತ್ರವಾಹನಲಾಭ, ಕುಜಸಂಬಂಧದಿಂದ ಕಳ್ಳರಕಾಟ, ರೋಗ, ಅಪಕೀರ್ತಿ. ಬುಧನಿಂದ ವಿದ್ಯಾಧನ. ಹೆರವರಿಗೆ ಉಪಕಾರ, ವರ್ತಕಲಾಭ. ಗುರುವಿನಿಂದ ಪ್ರಯೋ ಜನ, ಆರೋಗ್ಯ, ಸಂತಾನವೃದ್ಧಿ. ಶುಕ್ರನಿಂದ ಸಾಮಾನ್ಯಫಲ. ಶನಿಯಿಂದ ಕುಟುಂಬ ಪೀಡೆ, ಶೋಕ, ಕೇತುವಿಗೆ ಶುಭಸ್ಥಾನದಲ್ಲಿ ಶುಕ್ರನಿದ್ದರೆ ಬಹಳ ಸಂತೋಷಫಲ, ಅತ್ಯಂತ ವೈಭವ, ಅಶುಭಸ್ಥಾನದಲ್ಲಿದ್ದರೆ ಸ್ತ್ರೀಮೂಲಕ ಕಲಹ, ಧನನಾಶ ಮುಂತಾದ ಅಶುಭಫಲವುಂಟಾಗುತ್ತೆ. ೨-೭ರಲ್ಲಿದ್ದದರೆ ಅಪಮೃತ್ಯುಗಂಡ. ಇದಕ್ಕೆ ದುರ್ಗಾದಾನ ವನ್ನು ಮಾಡಿದರೆ ಶಾಂತಿಯಾಗುವುದು.

## ಕೇತುದಶಾ ರವಿಭುಕ್ತಿ ೪ ತಿಂಗಳು ೬ ದಿನಕ್ಕೆ ಫಲ

ಕೇತುದಶಾ ರವಿಭುಕ್ತಿಯಲ್ಲಿ ರವಿಗೆ ಸ್ಥಾನಬಲವಿದ್ದರೆ ಸುಖ, ಕೀರ್ತಿ, ಪುಣ್ಯ ವೃದ್ಧಿ, ಕೆಲಸಗಳು ತಾನಾಗಿ ಕೂಡಿಬರುತ್ತವೆ. ಭಾನುವಾರದಲ್ಲಿ ಕಾರ್ಯಾನುಕೂಲ

ವುಂಟಾಗುತ್ತದೆ. ಸ್ಥಾನಬಲವಿಲ್ಲದಿದ್ದರೆ ಇಂದ್ರಿಯಗಳಿಗೆ ಶ್ರಮ, ರೋಗ, ಮನಸ್ತಾಪ ಅಧಿಕಾರಹಾನಿ. ಪಾಪಸಂಬಂಧದಿಂದ ಕಷ್ಟ, ಚಂದ್ರಸಂಬಂಧದಿಂದ ಭೋಜನಭೋಗ ಸೌಖ್ಯ, ಸಾಲ ಹೆಚ್ಚುತ್ತೆ; ಕುಜನಿಂದ ದಾಯಾದಿ ಕಲಹ, ಆಯುಧಭಯ, ಅಗ್ನಿಭಯ ಬುಧನಿಂದ ವೈರಾಗ್ಯ, ಗುರುವಿನಿಂದ ಕುಟುಂಬಸೌಖ್ಯ, ಧರ್ಮಬುದ್ಧಿ ; ಶುಕ್ರನಿಂದ ವಿನೋದ, ಶನಿಯಿಂದ ಬೇನೆ, ಪಶುಹಾನಿ, ಕೇತುವಿಗೆ ಶುಭಸ್ಥಾನದಲ್ಲಿ ಜಗಳ, ಅಪ್ತ ಭಯ. ಮಾರಕಸ್ಥಾನದಲ್ಲಿದ್ದರೆ ಮೃತ್ಯುಭಯ. ಇದರ ಪರಿಹಾರಕ್ಕೆ ಶಿವಪೂಜೆ ಹೋಮಗಳನ್ನು ಮಾಡಿ ವೃಷಭ ದಾನ ಮಾಡಿದರೆ ಸೌಖ್ಯವುಂಟಾದೀತು.

## ಕೇತುದಶಾ ಚಂದ್ರಭುಕ್ತಿ ೭ ತಿಂಗಳಿಗೆ ಫಲ

ಕೇತುದಶಾ ಚಂದ್ರಭುಕ್ತಿಯಲ್ಲಿ ಚಂದ್ರನು ಬಲಿಷ್ಠನಾದರೆ ಭಾಗ್ಯ, ಕೀರ್ತಿ, ಜಯ, ಲಾಭ. ಪುಣ್ಯಕಾರ್ಯ, ಆರೋಗ್ಯ, ಕಾರ್ಯಸಿದ್ಧಿ. ದುರ್ಬಲನಾದರೆ ಮಾತೃವರ್ಗಕ್ಕೆ ಹಾನಿ, ಬಂಧುಗಳ ಅಗಲಿಕೆ. ಧನಧಾನ್ಯ ಧ್ವಂಸ, ಹೆಂಗಸರ ಜಗಳ, ಸರ್ಕಾರದ ತಂಟೆ, ಕೆಲಸ ಕೇಡು, ತಲೆಗೆ ಬೇನೆ, ರವಿಸಂಬಂಧವಿದ್ದರೆ ಉಷ್ಣರೋಗ, ಸ್ಥಳ ತಪ್ಪುವಿಕೆ: ಕುಜನಿಂದ ವಾಹನ, ಧನಧಾನ್ಯವೃದ್ಧಿ, ಸೋದರ ಸಂತೋಷ, ಬುಧನಿಂದ ನೆಂಟರ ವೃದ್ಧಿ, ದೇವರ ವಿಷಯ. ಗುರುವಿನಿಂದ ರಾಜವೃದ್ಧಿ, ರಾಜಭಯ. ಶುಕ್ರನಿಂದ ವಸ್ತ್ರಾಭರಣಲಾಭ, ಸ್ವಸ್ತ್ರೀಸೌಖ್ಯ. ಶನಿಯಿಂದ ಸಂತಾನಹಾನಿ. ಧನಧಾನ್ಯಕ್ಷಯ. ದಶಾದಿಪತಿಗೆ ಶುಭಸ್ಥಾನದಲ್ಲಿ ಸುಖಭೋಜನ, ನರವಾಹನ. ಅಶುಭಸ್ಥಾನದಲ್ಲಿ ಅಪಕೀರ್ತಿ, ರೋಗ, ವಿದೇಶವಾಸ, ಕಾರ್ಯಭಂಗ, ಅನ್ನಕ್ಕೆ ಅಗಚಾಟಲು. ಮಾರಕಲಕ್ಷಣವಿದ್ದರೆ ಅಪಮೃತ್ಯು, ಅದರ ಪರಿಹಾರಕ್ಕೆ ದುರ್ಗಾಜಪ ಮಾಡಿ ರಜತಾಶ್ವ ದಾನದಿಂದ ಕ್ಷೇಮ.

## ಕೇತುದಶಾ ಕುಜಭುಕ್ತಿ ೪ ತಿಂಗಳು ೨೭ ದಿನಕ್ಕೆ ಫಲ

ಕೇತುದಶಾ ಕುಜಭುಕ್ತಿಯಲ್ಲಿ ಕುಜನು ಲಗ್ನಕ್ಕೆ ಬಲವುಳ್ಳವನಾಗಿದ್ದರೆ ಅಮೋಘವಾದ ಫಲ, ದುರ್ಬನಾಗಿದ್ದರೆ ಸ್ವಾರಸ್ಯವಿಲ್ಲದ ಫಲ, ಶುಭಾಂಶದಲ್ಲಿದ್ದರೆ ಸಂತಸ, ಪಾಪಾಂಶದಲ್ಲಿದ್ದರೆ ಮುಜಗರ, ಪಾಪಸ್ಥಾನದಲ್ಲಿದ್ದರೆ ಕೇಡು, ರವಿ ಸಂಬಂಧವಾದರೆ ಸಿಡುಬುಹುಣ್ಣು ಆಗುವುದು, ಕಾಡಿನಲ್ಲಿ ತಿರುಗುವಿಕೆ, ಅಪಕ್ವವಾದ ಆಹಾರ, ಚಂದ್ರನಿಂದ ಕಣ್ಣುನೋವು, ಬುಧನಿಂದ ದುರ್ವಾರ್ತೆ, ಗುರುವಿನಿಂದ ಮರೆವು, ಧನಹಾನಿ ಶುಕ್ರನಿಂದ ಪ್ರಸ್ತಪ್ರಯೋಜನ, ವಸ್ತ್ರಾಭರಣಸೌಖ್ಯ, ಶನಿಯಿಂದ ಸಮಾನಜನರಿಗೆ ಹಾನಿ, ದನಕ್ಷಯ, ಜಗಳ. ದಶಾಧಿಪತಿಗೆ ಕೇಂದ್ರಾದಿ ಶುಭಸ್ಥಾನದಲ್ಲಿದ್ದರೆ ಕೇಡು, ಅಶುಭಸ್ಥಾನದಲ್ಲಿದ್ದರೆ ಮೇಲು. ಪಾಪಗ್ರಹಸಂಬಂಧವಿದ್ದರೆ ಫಲಭಂಗ; ಧನಹಾನಿ, ಕಳ್ಳರಕಾಟ, ಹಗೆಗಳ ತಂಟೆ, ನಿರ್ನಿಮಿತ್ತ ಜಗಳ, ಮಾರೀರೋಗ, ಅಜೀರ್ಣ, ಕೆಲಸ ಕೇಡು. ದಶಾಧಿಪತಿಗೆ ತ್ರಿಕೋಣ ಉಪಚಯಸ್ಥಾನಗಳಲ್ಲಿದ್ದರೆ ಶುಭದೃಷ್ಟಿಯಿಂದ ಕೆಲವುಒಗೆ ಲಾಭವೇ ಆಗುತ್ತೆ, ಸಾಲಕೊಟ್ಟವರಿಗೆ ದ್ರೋಹಮಾಡಿ ಹಣವಂತನಾಗುವನು, ಅದರಿಂದ ಮಾನವೂ ಬರುತ್ತೆ. ೨-೭ರಲ್ಲಿ ಮಾರಕಸಂಬಂಧವಾದರೆ ಜ್ವರಾದಿ

ಪೀಡೆ, ಕುಟುಂಬಕ್ಲೇಶ. ಅಪಮೃತ್ಯುಗಳಾಗುವವು. ಇದರ ಪರಿಹಾರಕ್ಕೆ ಸುಬ್ರಹ್ಮಣ್ಯ ಜಪ ಮಾಡಿಸಿ ಎಣ್ಣೆಗಡಿಗೆಯನ್ನು ದಾನಮಾಡಿದರೆ ಶಾಂತಿಯುಂಟಾಗುವುದು.

## ಕೇತುದಶಾ ರಾಹುಭುಕ್ತಿ ೧೨ ತಿಂಗಳು ೧೮ ದಿನಕ್ಕೆ ಫಲ

ಕೇತುದಶಾ ರಾಹುಭುಕ್ತಿಯಲ್ಲಿ ಬ್ರಹ್ಮರಾಕ್ಷಸಕಾಟ, ಪಿಶಾಚಬಾಧೆ, ಹುಚ್ಚು ಅಥವ ಗ್ರಹಚೇಷ್ಟೆ. ಮುಂಡೆಯರ ಕೈಮುಸುಕು,ಸಾಲ, ಬಡತನ, ಜನವಿರೋಧ, ಹೆಂಗಸಿಗೆ ರೋಗ, ಮಾನಭಂಗ, ಇದ್ದುದನ್ನು ಕಳೆದುಕೊಳ್ಳುವಿಕೆ, ಶೂದ್ರಪ್ರಭುವಿರೋಧ, ಕುಲಾಚಾರಕ್ಕೆ ಹಾನಿ, ದೇಶಾಟನ. ರಾಹು ಲಗ್ನಕ್ಕೆ ಕೇಂದ್ರದಲ್ಲಿದ್ದರೂ ೧೨ರಲ್ಲಿಯೂ ಪಾಪಗ್ರಹದಿಂದ ಕೂಡಿದರೂ ಹೀಗೆಯೇ ಕೆಟ್ಟಫಲಗಳು. ೩-೬-೧೧ರಲ್ಲಿ ಅಥವಾ ಮಿಥುನದಲ್ಲಿದ್ದರೆ ರಾಜಪ್ರಸಾದ, ಕುಟುಂಬಸುಖ, ಪಶುಧಾನ್ಯವೃದ್ಧಿ, ತೀರ್ಥಯಾತ್ರೆ, ಪಡುವಲ ಪ್ರಯಾಣ, ಕಾರ್ಯಾನುಕೂಲ, ಧನಾಗಮ.ರವಿಸಂಬಂಧವಿದ್ದರೆ ತಿರುಗುವಿಕೆ, ಅಧಿಕಾರಚ್ಯುತಿ, ಚಂದ್ರನಿಂದ ಚಿಂತೆ, ದುಃಖ, ಕುಜನಿಂದ ಘಾಯ, ಹೆಂಡತಿಗೆ ರೋಗ, ಸೋದರಮರಣ. ಬುಧನಿಂದ ವ್ಯಾಪಾರದಲ್ಲಿ ನಷ್ಟ, ದುಷ್ಕಾರ್ಯಗಳು, ಬಂಧುಹಾನಿ. ಗುರುವಿನಿಂದ ಸಂತಾನಧ್ವಂಸ, ದೇಹಜಾಡ್ಯ, ಧನನಾಶ, ಶುಕ್ರನಿಂದ ಭೋಗಪಟ್ಟು ವಸ್ತ್ರಾಭರಣ ಕಳೆದುಕೊಂಡು ಹಿಂಸೆಪಡುವಿಕೆ. ಶನಿಯಿಂದ ನೀಚಸೇವೆ, ಶ್ರಮ. ೨-೭ ರಲ್ಲಿ ಮೃತ್ಯುಭಯ. ದೊಡ್ಡ ಕುಂಬಳಕಾಯಿ ದಾನ ಕೊಡಬೇಕು.

## ಕೇತುದಶಾ ಗುರುಭುಕ್ತಿ ೧೧ತಿಂಗಳು ೬ ದಿನಕ್ಕೆ ಫಲ

ಕೇತುದಶಾ ಗುರುಭಕ್ತಿಯಲ್ಲಿ ಗುರುವು ಲಗ್ನಕ್ಕೆ ಬಲಕರನಾಗಿ ಸ್ಥಾನಬಲನಾದರೆ ನೆಂಟರು ಬರುವರು, ಪ್ರಸ್ತನಡೆಯುತ್ತೆ; ಪುತ್ರೋತ್ಸವ. ಅಧಿಕಾರ ಸಿಕ್ಕುತ್ತೆ. ಗುರುವಾರದಲ್ಲಿ ಲಾಭ. ಗುರುವು ಲಗ್ನಕ್ಕೆ ದುಷ್ಟಸ್ಥಾನದಲ್ಲಿ ದುರ್ಬಲನಾಗಿದ್ದರೆ ಸ್ಥಳತಪ್ಪಿ ಅರಸಿಗೆ ಹೆದರಿ ಪರಸ್ಥಳಹೋಗಿ ಉಪದ್ರವಪಟ್ಟು ಗೃಹಛಿದ್ರ ಹುಟ್ಟಿ ಹಣ ಕಳೆದುಕೊಂಡು ಬ್ರಹ್ಮದ್ವೇಷ ಹೊಂದಿ ಕೆಲಸ ಕೆಡುತ್ತೆ. ರವಿಸಂಬಂಧವಿದ್ದರೆ ಮಕ್ಕಳಕೂಡೆ ಜಗಳ, ಅಥವ ಉದ್ಯೋಗದಿಂದ ಚಲನ. ಚಂದ್ರಸಂಬಂಧವಿದ್ದರೆ ಜೀವನಾಧಿಕಾರ, ಕುಜನಿಂದ ಮೈಬಡವಾಗಿ ಕಡುಕಷ್ಟಪಡುವನು. ಬುಧನಿಂದ ವಿದ್ಯೆ ಕಲಿತು ಸಾಲ ಮಾಡಿ ಹಣ ಸೇರಿಸಿಕೊಂಡು ಜೀವನಕ್ಕೆ ಅನುಕೂಲಮಾಡಿಕೊಳ್ಳುವನು. ಶುಕ್ರನಿಂದ ವೇಶ್ಯಾಸ್ತ್ರೀಯರ ಸಂಬಂಧ, ಪುಸ್ತಕಗಳ ಸಂಗ್ರಹ, ಶುಭಕಾರ್ಯಗಳು. ಶನಿಯಿಂದ ಕೆಲಸಗಾರರನ್ನು ಇಟ್ಟುಕೊಳ್ಳುವನು, ಧಾನ್ಯ ದಾನಮಾಡುವನು. ದಶಾಧಿಪತಿಗೆ ಶಭಸ್ಥಾನವಲ್ಲಿದ್ದರೆ ಧನಲಾಭ. ದೇವದೀಕ್ಷೆ, ಪುತ್ರಸೌಖ್ಯ, ಕೃಷಿವೃದ್ಧಿ, ಪಾಪಸ್ಥಾನದಲ್ಲಿದ್ದರೆ ದ್ರವ್ಯಹಾನಿ, ಅಪಕೀರ್ತಿ, ಕುಟುಂಬದುಃಖ ಮಾರಕಸ್ಥಾನದಲ್ಲಿದ್ದರೆ ಅಪಮೃತ್ಯು ಭಯ. ಇದರ ಪರಿಹಾರಕ್ಕೆ ತಿಲದಾನ ಮಾಡುವುದರಿಂದ ಶಾಂತಿಯಾಗುವುದು.

---

## ಕೇತುದಶಾ ಶನಿಭುಕ್ತಿ ೧೩ ತಿಂಗಳು ೯ ದಿನಕ್ಕೆ ಫಲ

ಕೇತುದಶಾ ಶನಿಭುಕ್ತಿಯಲ್ಲಿ ಶನಿಯು ಜಾತಕನಿಗೆ ಜನ್ಮಕಾಲದಲ್ಲಿ ಲಗ್ನಕ್ಕೆ ೧-೩-೪-೫-೭-೯-೧೦-೧೧ರಲ್ಲಿಯೂ ತುಲೆಯಲ್ಲಿಯೂ ಪಾಪಗ್ರಹದೊಡನೆ ಸೇರಿದ್ದರೆ ಶನಿ ಕಾಟದ ಕಷ್ಟ ತಪ್ಪುವುದಿಲ್ಲ, ನೀಚರಿಗೆ ತಗ್ಗಿ ಜೀವಿಸಬೇಕು, ಬಂಧುಮರಣ, ಪದಾರ್ಥ ಹಾನಿ, ಸಾಲವೂ ರೋಗವು ಹೆಚ್ಚುತ್ತೆ, ಮಾಡಿದ ಕೆಲಸ ಕೆಡುತ್ತೆ. ಪಾಪದೆಶೆಯಲ್ಲಿ ಪಾಪಭುಕ್ತಿಯೊಳಗೆ ನಾನಾಬಗೆಯಾಗಿ ಅವರವರ ಯೊಗ್ಯತೆಗೆ ತಕ್ಕಂತೆ ಅತಿಕಷ್ಟಗಳುಂಟಾಗುವುದು. ಅಂಥಾ ಶನಿಯೇ ಲಗ್ನಕ್ಕೆ ೬-೮-೧೨ರಲ್ಲಿಯೂ ಮೇಷದಲ್ಲಿಯೂ ಶುಭಗ್ರಹದೊಡನೆ ಕೂಡಿದ್ದರೆ ಹೊಸಮನೆ, ಧಾನ್ಯರಾಶಿ, ಅಧಿಕಾರ, ವಾಹನ, ಕುಟುಂಬ ಸೌಖ್ಯ, ಶುಭೋತ್ಸವ, ಸಂತೋಷವೃದ್ಧಿಯಾಗಿ ಭುಕ್ತಿಯ ಕೊನೆಯಲ್ಲಿ ನಾನಾಬಗೆ ನಷ್ಟಗಳು ಸಂಭವಿಸುತ್ತೆ. ರವಿಸಂಬಂಧವಿದ್ದರೆ ಶನಿಭುಕ್ತಿ ಬಂದಾಗ ತಂದೆಕಡೆಯುವರಿಗೆ ಕೇಡು, ಪುತ್ರಮೂಲಕ ಧನಹಾನಿ. ಚಂದ್ರನಿಂದ ಶುಭಫಲಗಳು, ಕುಜನಿಂದ ಮೈಗೆ ತಾಪ, ಬುಧನಿಂದ ಸಾಲ ಹೆಚ್ಚಿದರೂ ಜೀವನಸುಖ, ರಹಸ್ಯಧನವಿರುತ್ತೆ. ಶುಕ್ರನಿಂದ ನಟ ವಿಟ ಗಾಯಕರ ಸಂಬಂಧ, ವ್ಯಭಿಚಾರ, ಕಾರ್ಯಾನುಕೂಲ. ದಶಾಧಿಪತಿಗೆ ೬-೮-೧೨ರಲ್ಲಿ ಪಾಪಸಂಬಂಧವಿದ್ದರೆ ವ್ಯಾಪಾರದಲ್ಲಿ ಧನಹಾನಿ, ಮಿತ್ರಪ್ರಭುವಿರೋಧ. ೨-೭ರಲ್ಲಿ ಅಪಮೃತ್ಯುಭಯ. ಇದರ ಪರಿಹಾರಕ್ಕೆ ಯಮಪ್ರತಿಮಾದಾನವನ್ನು ಮಾಡಬೇಕು.

---

## ಕೇತುದಶಾ ಬುಧಭುಕ್ತಿ ೧೧ ತಿಂಗಳು ೨೭ ದಿನಕ್ಕೆ ಫಲ

ಕೇತುದಶಾ ಬುಧಭುಕ್ತಿಯಲ್ಲಿ ಬುಧನು ಕೇಂದ್ರತ್ರಿಕೋಣಗಳಲ್ಲಿ ಸ್ಥಾನಬಲವುಳ್ಳವನಾಗಿ ಇಷ್ಟಫಲಾಧಿಕನಾದರೆ ಪಶುಲಾಭ, ೩ ಪುತ್ರಲಾಭ, ಭಾಗ್ಯಾಧಿಪತಿಯಿಂದ ಕೂಡಿದರೆ ಮಹದೈಶ್ವರ್ಯ, ಚತುರ್ಥಾಧಿಪತಿಯಿಂದ ಕೂಡಿದರೆ ಮನೆ ತೋಟ ಮುಂತಾದವುಗಳ ವೃದ್ಧಿ. ೬-೮-೧೨ರಲ್ಲಿಯೂ ನೀಚದಲ್ಲಿಯೂ ಇದ್ದರೆ ಜನವಿರೋಧ ಬಂಧುದ್ವೇಷ, ವ್ಯಾಪಾರದಲ್ಲಿ ಧನಹಾನಿ, ಪ್ರಭುಗಳ ಸಿಟ್ಟು, ಹೆಂಡತಿಗೆ ಗರ್ಭದ ಪೀಡೆ. ರವಿ ಸಂಬಂಧವಿದ್ದರೆ ತಪ್ಪದೆ ಉದ್ಯೋಗ ಸಿಕ್ಕುತ್ತೆ. ಚಂದ್ರನಿಂದ ತಾಯಿಯ ಕಡೆಯುವರಿಗೆ ಮೇಲು, ವಸ್ತ್ರಭೂಷಣಲಾಭ, ಕುಜನಿಂದ ಯುದ್ಧ ವಿಷಯ, ಚೋರ ವಿಷಭಾದೆ ಗುರುವಿನಿಂದ ಸುಖಲಾಭ, ಬಂಧುವೃದ್ಧಿ. ಶುಕ್ರನಿಂದ ವಾಹನಾಭರಣಲಾಭ, ವಿವಾಹಾದಿ ಶುಭಕಾರ್ಯಗಳು. ಶನಿಯಿಂದ ಪಶುಧಾನ್ಯ ಧ್ವಂಸ, ದಶಾಧಿಪತಿಗೆ ಶುಭಸ್ಥಾನದಲ್ಲಿ ಶುಭಗ್ರಹದಿಂದ ಕೂಡಿದ್ದರೆ ಧನ ವೆಚ್ಚವಾದರೂ ವಿದ್ಯಾಲಾಭವುಂಟು, ಶುಭಫಲವಾಗುತ್ತೆ. ಪಾಪಸ್ಥಾನದಲ್ಲಿ ಪಾಪಸಂಬಂಧವಿದ್ದರೆ ಕೆಲವು ಕಾರಣಗಳಿಂದ ಕೇಡುಗಳು ಉಂಟಾಗುವವು. ಬುಧನು ಮಾರಕಸ್ಥಾನದಲ್ಲಿದ್ದರೆ ಅಪಮೃತ್ಯುವು. ಇದರ ಪರಿಹಾರಕ್ಕೆ ಮೃಗದಾನವನ್ನು ಮಾಡಬೇಕು.

## ಶುಕ್ರದಶಾ ೨೦ ವರ್ಷಕ್ಕೆ ಫಲ

ಶುಕ್ರಮಹಾದೆಶೆಯಲ್ಲಿ ಸಂಭವಿಸುವ ಸಾಮಾನ್ಯಫಲಗಳು--ಶುಕ್ರನು ಸ್ಥಾನ ಬಲಾಧಿಕನಾಗಿದ್ದರೆ ರಾಜಸನ್ಮಾನ, ವಸ್ತ್ರಾಭರಣಲಾಭ, ವಿದ್ಯಾವಿನೋದ. ಅತ್ಯುಚ್ಚದಲ್ಲಿ ಕೀರ್ತಿ ಭೋಗಲಾಭಗಳು, ಉಚ್ಚದಲ್ಲಿ ಐಶ್ವರ್ಯಲಾಭ, ಅತಿನೀಚದಲ್ಲಿ ಭಯ, ರೋಗ ಗಳು, ನೀಚದಲ್ಲಿ ಧನಹಾನಿ, ಸ್ತ್ರೀಕಲಹ, ಉಚ್ಚಗ್ರಹಯುಕ್ತನಾದರೆ ಅಧಿಕಾರಭರಣ ಲಾಭ, ನೀಚಗ್ರಹಯುಕ್ತನಾದರೆ ಭಯಾಪವಾದ ಪಾಪಗಳು, ಉಚ್ಚಾಂಶದಲ್ಲಿ ನೀಚ ರಾಶಿಯೊಳಗೆ ಕೃಷಿ ವಾಣಿಜ್ಯಗಳಿಂದ ಧನಹಾನಿ, ನೀಚಾಂಶದೊಳಗೆ ಉಚ್ಚರಾಶಯಲ್ಲಿ ಕುಟುಂಬಭಾಗ್ಯವೃದ್ಧಿ, ಮೂಲತ್ರಿಕೋಣದಲ್ಲಿ ಕುಟುಂಬಸೌಖ್ಯ, ವಸ್ತ್ರಾಭರಣಲಾಭ ಸ್ವಕ್ಷೇತ್ರದಲ್ಲಿ ಗೃಹಲಾಭ, ಅತಿಮಿತ್ರಕ್ಷೇತ್ರದಲ್ಲಿ ವಾಹನಸೌಖ್ಯ, ಧನಧಾನ್ಯಸಮೃದ್ಧಿ. ಮಿತ್ರರಾಶಿಯಲ್ಲಿ ಭೋಗ, ವಿನೋಧ, ಭೂಲಾಭ,ಸಮರಾಶಿಯಲ್ಲಿ ಧನಧಾನ್ಯ ಸಂಗ್ರಹ ಶತ್ರುರಾಶಿಯಲ್ಲಿ ಸ್ತ್ರೀಪುತ್ರಪೀಡೆ, ಧನ ಭೂನಾಶ, ಅಧಿಕಾರಭಂಗ,ಅತಿ ಶತ್ರುರಾಶಿಯಲ್ಲಿ ಜನವಿರೋಧ, ಕಳತ್ರವ್ಯಸನ,ರೋಗ, ಶುಭಗ್ರಹದಿಂದ ಕೂಡಿದರೆ ಪುತ್ರಧನಲಾಭ,ಅಧಿ, ಕಾರಲಾಭ. ಪಾಪಗ್ರಹದಿಂದ ಕೂಡಿದರೆ ಸ್ಥಾನಭ್ರಂಶ,ಅರ್ಥಹಾನಿ, ಪ್ರಾಣಹಾನಿ, ಶುಭ ಗ್ರಹದಿಂದ ನೋಡಲ್ಪಟ್ಟರೆ ಸರ್ವಹಾನಿ,ರವಿಯಿಂದ ಕೂಡಿದರೆ ಬಂದು ವಿಯೋಗ,ಜನ ವಿರೋಧ, ಕಳತ್ರಗಂಡ. ತ್ರಿಕೋಣದಲ್ಲಿದ್ದರೆ ವಸ್ತ್ರಾಭರಣಸುಖ, ಕೀರ್ತಿಲಾಭಗಳು. ಕೇಂದ್ರದಲ್ಲಿದ್ದರೆ ವೈಭವ, ಸೌಭ್ಯ, ಸಮೃದ್ಧಿ. ದುಷ್ಟಸ್ಥಾನದಲ್ಲಿದ್ದರೆ ಸರ್ವಾರಿಷ್ಟಗಳು

## ಶುಕ್ರದಶಾ ಶುಕ್ರಭುಕ್ತಿ ೪೦ ತಿಂಗಳಿಗೆ ಫಲ

ಶುಕ್ರದಶಾ ಶುಕ್ರಭುಕ್ತಿಯಲ್ಲಿ ಶುಕ್ರನು ಜನ್ಮಕಾಲದಲ್ಲಿ ಲಗ್ನಕ್ಕಿಂತಲೂ ಕೇಂದ್ರ ದಲ್ಲಾಗಲಿ, ತ್ರಿಕೋಣದಲ್ಲಾಗಲಿ, ೩-೧೧ರಲ್ಲಾಗಲಿ, ಉಚ್ಚದಲ್ಲಾಗಲಿ ಇದ್ದರೆ ವಾಹನ ಲಾಭ, ಗ್ರಾಮಾಧಿಕಾರ, ಆಭರಣಪ್ರಾಪ್ತಿ, ಇಷ್ಟಸಿದ್ಧಿ, ಸೌಖ್ಯ, ಮನೆಯಲ್ಲಿ ಕಲ್ಯಾಣ, ಬಂಧುಸಂತೋಷ, ಹೊಸಮನೆಯ ಲಾಭ, ಶತ್ರುನಾಶ, ಕುಟುಂಬಸೌಖ್ಯ, ಅಧಿಕಾರ ವೃದ್ಧಿ, ಉಲ್ಲಾಸ,ಆ ಶುಕ್ರನು೬-೮-೧೨ ನೀಚಶತ್ರುರಾಶಿಗಳಲ್ಲಿದ್ದರೆ ಆಪ್ತರಿಗೆ ಆಪತ್ತು ನೆಂಟರಿಗೆ ಕೇಡು, ಕುಟುಂಬಕ್ಕೆ ಪೀಡೆ, ವಾಹನಕ್ಕೆ ಹಾನಿ, ಧನದಾನ್ಯಗಳಿಗೆ ಕ್ಷಯ, ಸ್ಥಳಕ್ಕೆ ಚಲನ, ಮಾನಕ್ಕೆ ಭಂಗ ಇವುಗಳುಂಟಾಗುತ್ತವೆ. ನವಮದಶಮಗಳಲ್ಯಾವುದ ಕ್ಕಾದರೂ ಅಧಿಪತಿಯಾಗಿ ಲಗ್ನಚತುರ್ಥಗಳಲ್ಲಿದ್ದರೆ ಅಂತ್ಯದಶಾ ಬಂದಾಗ ಅತ್ಯಂತ ವೈಭವ, ದೇಶಗ್ರಾಮಾಧಿಕಾರ, ಸೇನಾಧಿಕಾರ, ಮಹದೈಶ್ವರ್ಯ. ರವಿಸಂಬಂಧವಿದ್ದರೆ ರಾಜಕೋಪ, ಧನಹಾನಿ, ತಲೆನೋವು, ಕಣ್ಣುಬೇನೆ, ಪಿತೃವರ್ಗಕ್ಕೆ ಹಾನಿ. ಚಂದ್ರ ನಿಂದ ಭೋಗಾಲಂಕಾರಸೌಖ್ಯ. ಕುಜನಿಂದ ಭ್ರಾತೃಕಲಹ, ಪ್ರಭುದ್ವೇಷ; ಬುಧನಿಂದ ವಿಚಾರಜ್ಞಾನ, ವರ್ತಕಲಾಭ; ಗುರುವಿನಿಂದ ಪುತ್ರವೃದ್ಧಿ, ದೇಹಾರೋಗ್ಯ, ಸತ್ಕಾರ್ಯ ಶನಿಯಿಂದ ಶೂದ್ರಸ್ತ್ರೀಕಲಹ, ಆಪ್ತರಿಗೆ ಆಪತ್ತು, ಪಶುಕ್ಷೇತ್ರಗಳಿಗೆ ಹಾನಿ. ಶುಕ್ರನ ಲಗ್ನಕ್ಕೆ ೨-೭ರಲ್ಲಿದ್ದರೆ ದೇಹರೋಗ, ಅದಕ್ಕೆ ರುದ್ರಜಪದಿಂದಲೂ ಗೋಮಹಿಷೀದಾನ ದಿಂದಲೂ ಪರಿಹಾರವಾಗುವುದು.

## ಶುಕ್ರದಶಾ ರವಿಭುಕ್ತಿ ೧೨ ತಿಂಗಳಿಗೆ ಫಲ

ಶುಕ್ರದಶಾ ರವಿಭುಕ್ತಿಯಲ್ಲಿರವಿಯು ೩-೧೧ರಲ್ಲಿದ್ದರೆ ರಾಜಪ್ರಸಾದ,ಜಯಲಾಭ ಗಳು, ಜ್ವರ, ರವಿಯು ಉಚ್ಚಸ್ವಕ್ಷೇತ್ರಗಳಲ್ಲಿದ್ದರೆ ನಷ್ಟದ್ರವ್ಯ ಸಿಕ್ಕುತ್ತೆ. ಕೇಂದ್ರ ತ್ರಿಕೋಣಗಳಲ್ಲಿದ್ದರೆಅಲ್ಪಭಾಗ್ಯ ಅಲ್ಪಫಲ,ಆದಿಯಲ್ಲಿಕಷ್ಟ,ಬಳಿಕ ಸೌಖ್ಯ;೧-೬-೮-೧೨ ನೀಚರಾಶಿಗಳಲ್ಲಿ ರವಿಯಿದ್ದರೆ ನಷ್ಟ, ಕಷ್ಟ ಕಲಹ;ರೋಗ, ಶಿಕ್ಷೆ. ಧನಹಾನಿ ರವಿಯು ಚಂದ್ರನೊಡಗೂಡಿದರೆ ಮೇಲು, ಕುಜನೊಡನೆ ಕೀಳು, ಬುಧನೊಡನೆ ಕಲ್ಯಾಣ.ಗುರುವಿ ನೊಡನೆ ಪುತ್ರಲಾಭ, ಶುಕ್ರನೊಡನೆ ವಸ್ತ್ರಾಭರಣ, ಶದಿಯೊಡನೆ ಭೃತ್ಯಹಾನಿ ದಶಾಧಿ ಪತಿಗೆ ಕೇಂದ್ರತ್ರಿಕೋಣಗಳಲ್ಲಿರುವ ರವಿಯು ಭುಕ್ತಿಯಲ್ಲಿ ಕೃಷಿಸೌಖ್ಯ, ಪಶುವೃದ್ಧಿ. ೬-೮-೧೨ರಲ್ಲಿ ಸ್ತ್ರೀವಿಯೋಗ, ರಾಜಭೀತಿ. ರವಿಯು ಮಾರಕಲಕ್ಷಣವುಳ್ಳವನಾದರೆ ಮೃತ್ಯು. ಇದರ ಪರಿಹಾರಕ್ಕೆ ಸೂರ್ಯಪ್ರಾರ್ಥನೆ ಮಾಡಲು ಲೇಸುಂಟಾಗುವುದು.

## ಶುಕ್ರದಶಾ ಚಂದ್ರಭುಕ್ತಿ ೨೦ ತಿಂಗಳಿಗೆ ಫಲ

ಶುಕ್ರದಶಾ ಚಂದ್ರಭುಕ್ತಿಯಲ್ಲಿ ಚಂದ್ರನು ಲಗ್ನಕ್ಕೆ ಶುಭಸ್ಥಾನದಲ್ಲಿದ್ದರೆ ಅತ್ಯಂತ ಶುಭ, ಪಾಪಸ್ಥಾನದಲ್ಲಿದ್ದರೆ ಅತ್ಯಂತ ಕಷ್ಟ. ವಾಯುರೋಗ, ಶ್ಲೇಷ್ಮವೃದ್ಧಿ, ಚಂದ್ರನಿಗೆ ರವಿಸಂಬಂಧದಿಂದ ನೇತ್ರರೋಗ, ಕುಜನಿಂದ ಚೋರಪೀಡೆ, ಬುಧನಿಂದ ಜ್ಞಾನಾರ್ಥ ಲಾಭ, ಗುರುವಿನಿಂದ ಬ್ರಾಹ್ಮಣಪ್ರಭು ಮೂಲಕ ಲಾಭ, ಶನಿಯಿಂದ ಸ್ವತ್ತುಗಳಿಗೆ ಹಾನಿ, ಚಂದ್ರನು ಶುಕ್ರನಿಗೆ ಅನುಕೂಲ ಕ್ಷೇತ್ರದಲ್ಲಿದ್ದು ಶುಭಗ್ರಹಗಳೊಡಗೂಡಿದರೆ ಧನಧಾನ್ಯ ಸಮೃದ್ಧಿ, ಮಿತ್ರಲಾಭ, ಸಾಮ್ರಾಜ್ಯ ಸೌಖ್ಯ, ಶತ್ರುಪಲಾಯನ, ಶುಕ್ರವಾರ ದಲ್ಲಿ ಪ್ರಭುದರುಶನ, ವಿರುದ್ಧ ಸ್ಥಾನಗಳಲ್ಲಿ ಇದ್ದರೆ ಅನಾರೋಗ್ಯ, ಅಪಕೀರ್ತಿ ಅಕಾಲ ಭೋಜನ,೨-೭ರಲ್ಲಿ ಅಪಮೃತ್ಯು. ಇದರ ಪರಿಹಾರಕ್ಕೆ ದುರ್ಗಾಜಪವನ್ನು ಮಾಡಬೇಕು

## ಶುಕ್ರದಶಾ ಕುಜಭುಕ್ತಿ ೧೪ ತಿಂಗಳಿಗೆ ಫಲ

ಶುಕ್ರದಶಾ ಕುಜಭುಕ್ತಿಯಲ್ಲಿ ಕುಜನು ಜನ್ಮಕಾಲದಲ್ಲಿ ಲಗ್ನಕ್ಕೆ ಕೇಂದ್ರತ್ರಿಕೋಣ ಉಪಚಯ, ಉಚ್ಚಮಿತ್ರರಾಶಿಗಳಲ್ಲಿ ಬಲವಂತನಾಗಿ ಲಗ್ನಾಧಿಪತಿಯಿಂದಾಗಲಿ, ಕರ್ಮಾಧಿಪತಿಯಿಂದಾಗಲಿ ಯುಕ್ತನಾದರೆ ಲಕ್ಷ್ಮೀಕಟಾಕ್ಷ, ನಷ್ಟವಸ್ತು ಲಾಭ, ಭೂ ಲಾಭ, ಪುತ್ರವೃದ್ಧಿ, ಪ್ರಾಣಾಧಿಕಾರ, ಅಗ್ನಿಕಾರ್ಯ ಋಣಲಾಭ, ಶತ್ರುಹಾನಿ. ಸ್ತ್ರೀಸೌಖ್ಯ ಲಗ್ನಕ್ಕೆ ೮-೧೨ ನೀಚರಾಶಿಗಳಲ್ಲಿದ್ದರೆ ಸ್ಥಾವರಹಾನಿ, ಸ್ಥಿರಜೀವಭಂಗ, ಸಾಲಗಾರರ ಕಾಟ, ಶಸ್ತ್ರಾಗ್ನಿ ವಿಷಭಾಧೆ, ಕಲಹ, ಕಾರ್ಯಹಾನಿ, ರವಿಯೊಡಗೂಡಿದರೆ ಸಿಡುಬು, ಜ್ವರ, ಅತಿಸಾರ, ಪಿತ್ತ, ಧನಹಾನಿ. ಚಂದ್ರನಿಂದ ಮೃಷ್ಟಾನ್ನ, ಬುಧನಿಂದ ನೆಂಟರ ವಿರೋಧ, ವ್ಯಾಪಾರದಲ್ಲಿ ಹಾನಿ. ಸೋದರಮಾವನಿಗೆ ಮರಣ. ಗುರುವಿನಿಂದ ಧನ ಸೌಖ್ಯ, ಅಧಿಕಾರ, ಶುಕ್ರನಿಂದ ವಾಹನಾಧಿಕಾರ. ಶನಿಯಿಂದ ದಾಸೀವಿರೋಧ, ವಾಯುನೋವು. ದಶಾಧಿಪತಿಗೆ ಕೇಂದ್ರಾದಿ ಶುಭಸ್ಥಾನಗಳಲ್ಲಿದ್ದರೆ ಪತ್ನೀಪುತ್ರ ಸಂತೋಷ, ಪಶುಧಾನ್ಯ ಸಂಗ್ರಹ, ಜಗಳದಲ್ಲಿ ಜಯ, ತೋಟದ ಕೆಲಸಕಾರ್ಯ ಸಿದ್ಧಿ,

ವ್ಯಯಾದಿ ದುಷ್ಟಸ್ಥಾನಗಳಲ್ಲಿ ಪಾಪಸಂಬಂಧದಿಂದ ಸೋದರ ಕಲಹ, ಹಗೆ ಹೆಚ್ಚು, ಜ್ವರ, ಸ್ಥಳಭ್ರಂಶ, ರಾಜಭೀತಿ, ಮೃತ್ಯುಭಯ. ಸ್ಕಂದಪೂಜೆಯಿಂದ ಶಾಂತಿಯು.

## ಶುಕ್ರದಶಾ ರಾಹುಭುಕ್ತಿ ೩೬ ತಿಂಗಳಿಗೆ ಫಲ

ಶುಕ್ರದಶಾ ರಾಹುಭುಕ್ತಿಯಲ್ಲಿ ರಾಹು ಕೇಂದ್ರತ್ರಿಕೋಣ ಉಚ್ಚ ಉಪಚಯ ಗಳಲ್ಲಿ ಮಹಾಸೌಖ್ಯ, ದುಷ್ಟಸ್ಥಾನಗಳಲ್ಲಿ ಮಹಾ ಕಷ್ಟ, ಅವನೊಡನೆ ರವಿ ಸೇರಿದರೆ ತಲೆನೋವು, ಚಂದ್ರ ಸೇರಿದರೆ ಅಸೌಖ್ಯ, ಕುಜ ಸೇರಿದರೆ ಜ್ಞಾನಪೈತ್ಯ, ಬುಧನಿಂದ ಕಲಹ, ಗುರುವಿನಿಂದ ಕುಟುಂಬಹಾನಿ. ಶುಕ್ರನಿಂದ ಭೋಗಧನಹಾನಿ, ಕುದುರೆಯಿಂದ ಬಿದ್ದು ಕಾಲು ಮುರಿಯುತ್ತೆ. ಶನಿ ಸೇರಿದರೆ ವಾಯುರೋಗ. ದಶಾಧಿಪತಿಗೆ ಕೇಂದ್ರ ತ್ರಿಕೋಣ ೬-೧೧ರಲ್ಲಿ ಕಾರ್ಯಸಿದ್ಧಿ,ಉತ್ತಮ ಫಲ. ೮-೧೨ರಲ್ಲಿ ಪಾಪಗ್ರಹದಿಂದ ಕೂಡಿ ದರೆ ಅಶುಭ, ಪಿತೃಕರ್ಮ. ೨-೭ರಲ್ಲಿ ಅಪಮೃತ್ಯುಭಯ.ಇದರ ಪರಿಹಾರಕ್ಕೆ ದುರ್ಗಾ ಜಪ ಮಾಡಿ ಕುಂಬಳಕಾಯಿ ದಾನ ಕೊಡಬೇಕು.

## ಶುಕ್ರದಶಾ ಗುರುಭುಕ್ತಿ ೩೨ ತಿಂಗಳಿಗೆ ಫಲ

ಶುಕ್ರದಶಾ ಗುರುಭುಕ್ತಿಯಲ್ಲಿ ಗುರುವು ಲಗ್ನಕ್ಕೆ ಕೇಂದ್ರ ತ್ರಿಕೋಣ ಉಚ್ಚ ೩-೧೧ರಲ್ಲಿ ಲಾಭ, ಶುಭ, ಬಡಗಲು ಪ್ರಯಾಣ, ಜಯ. ೬-೮-೧೨ ನೀಚಗಳಲ್ಲಿ ಕಾರ್ಯ ಹಾನಿ, ರಾಜದ್ವೇಷ, ಗುರುದ್ವೇಷ, ಬಂಧುವಿಯೋಗ. ರವಿಸಂಬಂಧದಿಂದ ಕ್ಷೇಮ, ಚಂದ್ರನಿಂದ ಸುಖಲಾಭ, ಕುಜನಿಂದ ಕುಟುಂಬಹಾನಿ, ಕೆಲಸಕೇಡು. ಬುಧನಿಂದ ಸತ್ಕಾರ, ಶುಕ್ರನಿಂದ ಗರ್ಭಸೌಖ್ಯ, ಐಶ್ವರ್ಯ. ಶನಿಯಿಂದ ಅಸೌಖ್ಯ, ದಶಾಧಿಪತಿಗೆ ಶುಭಸ್ಥಾನದಲ್ಲಿ ಸೌಖ್ಯ,ಸಾಲ ಕೊಟ್ಟದ್ದು ವಸೂಲಾಗುತ್ತೆ. ವ್ಯವಸಾಯವೃದ್ಧಿ. ದುಷ್ಟ ಸ್ಥಾನದಲ್ಲಿ ದೇಶಾಂತರದಲ್ಲಿ ಭಯ. ೨-೭ ಅಪಮೃತ್ಯುಭಯ ಇದರ ಪರಿಹಾರಕ್ಕೆ ರುದ್ರ ಜಪ ಮಾಡಿ ರತ್ನಕೂಷ್ಮಾಂಡ ದಾನವನ್ನು ಮಾಡಬೇಕು.

## ಶುಕ್ರದಶಾ ಶನಿಭುಕ್ತಿ ೩೮ ತಿಂಗಳಿಗೆ ಫಲ

ಶುಕ್ರದಶಾ ಶನಿಭುಕ್ತಿಯಲ್ಲಿ ಶನಿ ಪ್ರಬಲನಾದರೆ ಸಾಮ್ರಾಜ್ಯಯೋಗ, ಮಹದೈ ಶ್ವರ್ಯ, ಅಧಿಕ ಸಂಪತ್ತು, ಪ್ರಬಲಾಧಿಕಾರ. ದುಷ್ಟಸ್ಥಾನಗಳಲ್ಲಿದ್ದರೆ ಆದಿಯಲ್ಲಿ ದೇಹಾಲಸ್ಯ, ಬಳಿಕ ಸೌಖ್ಯ. ರವಿಯೊಡಗೂಡಿದರೆ ಸ್ಥಳ ತಪ್ಪುತ್ತೆ, ಚಂದ್ರನಿಂದ ಮಾತೃಕಷ್ಟ; ಕುಜನಿಂದ ಕಲಹ, ಸಾಲ, ಬುಧನಿಂದ ಪಾಪಚಿಂತೆ, ಗುರುವಿನಿಂದ ಅಪ ವಾದ, ಶುಕ್ರನಿಂದ ಸ್ತ್ರೀವ್ಯಾಧಿ, ದಶಾಧಿಪತಿಗೆ ಶುಭಸ್ಥಾನದಲ್ಲಿ ಧನಾರ್ಜನೆ, ದುಷ್ಟ ಸ್ಥಾನದಲ್ಲಿ ಅಧಿಕಾರದಿಂದ ಕೇಡು. ೨-೭ರಲ್ಲಿ ಅಪಮೃತ್ಯು. ಇದರ ಪರಿಹಾರಕ್ಕೆ ಮಹಿಷೀ ದಾನವನ್ನು ಮಾಡಬೇಕು.

## ಶುಕ್ರದಶಾ ಬುಧಭುಕ್ತಿ ೩೪ ತಿಂಗಳಿಗೆ ಫಲ

ಶುಕ್ರದಶಾ ಬುಧಭುಕ್ತಿಯಲ್ಲಿ ಬುಧನು ಜನ್ಮಕಾಲದಲ್ಲಿ ಲಗ್ನಕ್ಕೆ ಕೇಂದ್ರತ್ರಿಕೋಣ ೩-೧೧ ಉಚ್ಚಗಳಲ್ಲಿ ಶುಭಗ್ರಹದೊಡನೆ ಕೂಡಿದರೆ ಸೌಭಾಗ್ಯಯೋಗ, ಮಕ್ಕಳಿಗೆ ಮದುವೆ, ವಾಹನಪ್ರಾಪ್ತಿ, ಲಕ್ಷ್ಮೀಪ್ರಾಪ್ತಿ, ಕೇಳೀವಿಲಾಸ, ಸತ್ಕಾರಜಯ, ಸನ್ಮಾನ.

ಲಗ್ನಕ್ಕೆ ೬-೮-೧೨ ನೀಚಗಳಲ್ಲಿ ಪಾಪಗ್ರಹದಿಂದ ಕೂಡಿದರೆ ಮಾನಭಂಗ, ಬು
ಕೆಡುತ್ತೆ, ನೆಂಟರ ಜಗಳ, ಸೋದರಮಾವನ ಸಾವು, ಅಧಿಕಾರಕ್ಕೆ ಹಾನಿ, ಧನಧಾ
ಗಳಿಗೆ ನಾಶ, ಅವನಿಗೆ ರವಿಸಂಬಂಧವಾದರೆ ಪಿತ್ತರೋಗ, ಜ್ವರ, ಅತಿಸಾರಭೇ
ಚಂದ್ರನಿಂದ ಕುದುರೆ ವಿರುತ್ತಾನೆ, ರತ್ನಾಭರಣ; ಕುಜನಿಂದ ಸಾಲ, ರೋಗ, ಗಭ
ವ್ಯಸನ; ಗುರುವಿನಿಂದ ಪುತ್ರಲಾಭ, ಆರೋಗ್ಯ; ಶುಕ್ರನಿಂದ ಭೋಗವಿಹಾರ, ಗೀ
ಲಂಕಾರ, ಸಂತೋಷ. ಶನಿಯಿಂದ ಪಶ್ವಾದಿಹಾನಿ, ಬುಧನು ಶುಕ್ರನಿಗೆ ಉತ್ತಮಸ್ಥಾ
ದಲ್ಲಿ ಉತ್ತಮಫಲ ಕೊಡುತ್ತಾನೆ. ಅಧಮಸ್ಥಾನದಲ್ಲಿ ಕೀಳು ಮಾಡುತ್ತಾನೆ. ೨-೭ರ
ಅಪಮೃತ್ಯು. ಇದರ ಪರಿಹಾರಕ್ಕೆ ವಿಷ್ಣುಸೇವೆ ಮಾಡಲು ಸೌಖ್ಯವುಂಟಾಗುವದ

## ಶುಕ್ರದಶಾ ಕೇತುಭುಕ್ತಿ ೧೪ ತಿಂಗಳಿಗೆ ಫಲ

ಶುಕ್ರದಶಾ ಕೇತುಭುಕ್ತಿಯಲ್ಲಿ ಕೇತುವು ಸುಪ್ರಭಾವಾಂಶದಲ್ಲಿದ್ದರೆ ಪುಣ್ಯಕಾ
ಕರ್ಮಸಿದ್ಧಿ, ಮೃಷ್ಟಾನ್ನಭೋಜನ, ೬-೮-೧೨ ನೀಚಗಳಲ್ಲಿ ಕಷ್ಟಫಲ, ಪಿತ್ತರೋಗ
ಉತ್ತಮಸ್ಥಾನಗಳಲ್ಲಿ ಕಾರ್ಯಸಿದ್ಧಿ. ಕೇತುವು ರವಿಸಹಿತನಾದರೆ ಬಳಲಿಕೆ, ಜಗಳ
ಚಂದ್ರನಿಂದ ಕಳವು, ಧನಹಾನಿ. ಕುಜನಿಂದ ರೋಗ, ದಾರಿಯಲ್ಲಿ ಕಳ್ಳರ ಕಾಟ, ನಷ್ಟ
ಬುಧನಿಂದ ನೆಂಟರ ಜಗಳ, ಸಾಲಮಾಡಿ ಆಸ್ತಿ ಸೇರಿಸುವನು, ಮಾನಹಾನಿಯಾದರು
ವಿಕಾಂಗಿಯಾಗುವನು. ಗುರುವಿನಿಂದ ತನ್ನ ಕುಟುಂಬವನ್ನೇ ನಿಗ್ರಹಿಸುವನು, ಕಷ್ಟ
ಪಡುವನು. ಶುಕ್ರನಿಂದ ಗರ್ಭವ್ಯಸನ, ಶಯ್ಯಾನುಭವ, ಸೌಖ್ಯಭಂಗ. ಶನಿಯಿಂ
ನೀಚಕಲಹ, ಕೇತುವು ಶುಕ್ರನಿಗೆ ಕೇಂದ್ರತ್ರಿಕೋಣ ೩-೧೧-೬ರಲ್ಲಿ ಶುಭಗ್ರಹದೊಡ
ಕೂಡಿದ್ದರೆ ಧನಲಾಭ, ಸಂಭೋಗಸುಖ, ಸಂತಾನವೃದ್ಧಿ, ಕೆಲಸ ಕೈಗೂಡುತ್ತೆ
ಮನೆಯಲ್ಲಿ ಮಂಗಳಕಾರ್ಯ, ಪಶುಲಾಭ, ಪಡುವಲ ಪ್ರಯಾಣ, ಪ್ರಭುಸನ್ಮಾನ
ಸರ್ವಾನುಕೂಲ. ಶುಕ್ರನಿಗೆ ೮-೧೨ರಲ್ಲಿ ಪಾಪಗ್ರಹದೊಡನೆ ಕೂಡಿದರೆ ಹೆಂಗ
ಜಗಳ, ಕಳತ್ರಭಂಗ, ಮಾನಹಾನಿ, ಆಪತ್ತು, ಭಯ, ಸ್ಥಳ ತಪ್ಪುತ್ತೆ. ಕೇತು
ಲಗ್ನಕ್ಕೆ ೭-೧೨ರಲ್ಲಿದ್ದರೆ ಅಪಮೃತ್ಯು ಭಯ, ಇದರ ಪರಿಹಾರಕ್ಕೆ ಮೃತ್ಯುಂಜಯ
ಜಪವನ್ನು ಮಾಡಿ ಭಾಗದಾನವನ್ನು ಮಾಡಿದರೆ ಸೌಖ್ಯವುಂಟಾಗುವುದು.

**ದಶಾ ಅಂತರ್ದಶಾ ಫಲಭಾಗ ಸಂಪೂರ್ಣ**

## ಜಾತಕಜ್ಞಾನ ರತ್ನಾವಳಿ ಸಮಾಪ್ತಿ



**ಮಹೇಶ್ವರ ಮುದ್ರಣಾಲಯ, ಸರಸ್ವತಿಪುರಂ, ಮೈಸೂರು-೯**
2000 ಪ್ರತಿಗಳು — 1986

## ನಮ್ಮ ಪ್ರಕಟಣೆಗಳು

ಸಟೀಕಾ ವ್ರತ ರತ್ನಂ
ಸಹಸ್ರನಾಮ ರತ್ನಂ
ಅಷ್ಟೋತ್ತರ ರತ್ನಮಾಲಾ
ಮಾಘಪುರಾಣಮ್
ವಚನ ದೇವೀ ಮಹಾತ್ಮ್ಯೆ
ಶ್ರೀಕೃಷ್ಣ ಬೋಧಾಮೃತ
ಬ್ರಹ್ಮೋತ್ತರ ಖಂಡ
ಸಟೀಕಾ ಜ್ಞಾನ ಸಿಂಧು
ವೇದಾಂತ ಮುಕ್ತಿಮಾರ್ಗ ಪ್ರದೀಪಿಕೆ
ಕೈವಲ್ಯ ನವನೀತವು
ಮಹದೇಶ್ವರ ಚರಿತ್ರೆ
ಕೈವಾರ ನಾರಣಪ್ಪನವರು
ಯಕ್ಷಗಾನ ನಳ ಚರಿತ್ರೆ
ವಚನ ನಳ ಚರಿತ್ರೆ
ಭಕ್ತ ಪುರಂದರದಾಸರು
ವೇಂಕಟೇಶ ಮಹಾತ್ಮ್ಯೆ
ಶ್ರೀ ಸಂತೋಷೀ ಮಾತಾ
ಋಗ್ವೇದ ನಿತ್ಯಕರ್ಮ
ಯಜುರ್ವೇದ ನಿತ್ಯ ಕರ್ಮ
ನವಗ್ರಹ ಜಪವಿಧಿ
ಸಂಪ್ರದಾಯದ ಹಾಡುಗಳು
ತ್ರಿಚಕಲ್ಪ ಸೂರ್ಯನಮಸ್ಕಾರ
ಶ್ರೀರಾಮ ಕಥಾ ಮಹಿಮೆ
ರಾಘವೇಂದ್ರ ಸಹಸ್ರ ನಾಮ
ಬೃಹಜ್ಜಾತಕಾಖ್ಯ ಹೋರಾಶಾಸ್ತ್ರ

ಸಿದ್ಧಿವಿನಾಯಕ ವ್ರತ
ಮಂಗಳಗೌರೀ ವ್ರತ
ಸ್ವರ್ಣ ಗೌರೀ ವ್ರತ
ಸತ್ಯನಾರಾಯಣ ವ್ರತ
ಗಣಪತಿ ಸಹಸ್ರನಾಮ
ಶಿವ ಸಹಸ್ರ ನಾಮ
ಸುಬ್ರಹ್ಮಣ್ಯ ಸಹಸ್ರನಾಮ
ಶ್ರೀ ರಾಮ ಸಹಸ್ರ ನಾಮ
ವೇಂಕಟೇಶ ಸಹಸ್ರನಾಮ
ನೃಸಿಂಹ ಸಹಸ್ರ ನಾಮ
ವಿಷ್ಣು ಸಹಸ್ರನಾಮ
ದುರ್ಗಾ ಸಹಸ್ರ ನಾಮ
ದೇವೀ ಸಹಸ್ರ ನಾಮ
ಲಲಿತಾ ಸಹಸ್ರ ನಾಮ
ಲಕ್ಷ್ಮೀ ಸಹಸ್ರ ನಾಮ
ಗಾಯತ್ರೀ ಸಹಸ್ರನಾಮ
ಶಿವ ಸ್ತೋತ್ರ ಮಾಲಾ
ದೇವೀ ಸ್ತೋತ್ರ ಮಾಲಾ
ವಿಷ್ಣು ಸ್ತೋತ್ರ ಮಾಲಾ
ಜ್ಯೋತಿಷ ಬಾಲಬೋಧೆ
ಜಾತಕ ತತ್ವಂ
ಜ್ಯೋತಿಷ ಸರ್ವ ವಿಷಯಾಮೃತ
ನವಗ್ರಹ ಚಿಂತಾಮಣಿ
ಆಂಗ್ಲ ಭಾಷಾ ಪ್ರಕಾಶಕ
ವಚನ ಭಾರತ ಕಥಾ ಸಂಗ್ರಹ

ಬಿ.ಯಿ.ಕೃಷ್ಣಯ್ಯಶೆಟ್ಟಿ ಅಂಡ್ ಸನ್ ಬೆಂಗಳೂರು - 53


JATAKAJNANA RATNAVALI Rs. 18-00